# ಸಿದ್ಧಗಂಗಾ



ದಿನಾಂಕ: 14-1-82 ರ ಸಂಕ್ರಮಣದಂದು ತುಮಕೂರಿನಲ್ಲಿ ನಡೆದ ಶಿವಯೋಗಿ ಸಿದ್ಧರಾಮ ಜಯಂತಿ ಉದ್ಘಾಟನಾ ಸಮಾರಂಭದಲ್ಲಿ ಶ್ರೀ ಶ್ರೀಗಳವರು. ಚಿತ್ರದಲ್ಲಿ ಸಿರಿಗೆರೆ ಶ್ರೀಗಳು, ಶ್ರೀ ಬಿ. ಡಿ. ಜತ್ತಿ ಮತ್ತು ಕೇಂದ್ರ ಸಚಿವ ಶ್ರೀ ವೀರೇಂದ್ರ ಪಾಟೀಲರನ್ನು ಕಾಣಬಹುದು.

ಜನವರಿ 1982

## ತುಂಬು ಹೃದಯದ ಆಹ್ವಾನ

ಶ್ರೀ ಶ್ರೀಗಳವರ 'ಸುವರ್ಣ ಮಹೋತ್ಸವ ಸಮಾರಂಭ'
82 ರ ಏಪ್ರಿಲ್ 24, 25 ಮತ್ತು 26.
ರಾಷ್ಟ್ರಪತಿ ಶ್ರೀ ಎನ್. ಸಂಜೀವರೆಡ್ಡಿಯವರಿಂದ 24 ರಂದು
ಸಮಾರಂಭದ ಉದ್ಘಾಟನೆ ಮತ್ತು 200 ಹಾಸಿಗೆಗಳ
ಆಸ್ಪತ್ರೆಯ ಶಂಕುಸ್ಥಾಪನಾ ಕಾರ್ಯಕ್ರಮ.

ಸರ್ವರಿಗೂ ಆದರದ ಸ್ವಾಗತ

## ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ರಥೋತ್ಸವಾಹ್ವಾನ ಪತ್ರಿಕಾ

ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ೧೯೦೩ಕ್ಕೆ ಸರಿಯಾದ ಶ್ರೀ ದುರ್ಮತಿನಾಮ ಸಂವತ್ಸರದ

ಮಾಘ ಬಹುಳ ೫ ಶನಿವಾರ 13-2-82 ಸ್ವಸ್ತಿವಾಚನಾದಿಗಳು ಮತ್ತು ಧ್ವಜಾರೋಹಣಾದಿ ಕಾರ್ಯಗಳು.
,, ,, ೬ ಭಾನುವಾರ 14-2-82 ವೃಷಭವಾಹನ ಮತ್ತು ಸಿಂಹವಾಹನ
,, ,, ೭ ಸೋಮವಾರ 15-2-82 ರಥೋತ್ಸವ ಮತ್ತು ರುದ್ರಾಕ್ಷಿ ಮಂಟಪೋತ್ಸವ
,, ,, ೮ ಮಂಗಳವಾರ 16-2-82 ಹುಲಿವಾಹನ ಮತ್ತು ರಾವಣವಾಹನ
,, ,, ೯ ಬುಧವಾರ 17-2-82 ಮುತ್ತಿನಪಾಲಕಿ ಮತ್ತು ನವರಂಗಪಾಲಕಿ ಉತ್ಸವ
,, ,, ೧೦ ಗುರುವಾರ 18-2-82 ಬೆಳ್ಳಿಪಾಲಕಿ ಉತ್ಸವ
,, ,, ೧೧ ಶುಕ್ರವಾರ 19-2-82 ಬಿಲ್ವವೃಕ್ಷವಾಹನ ಮತ್ತು ಅಶ್ವವಾಹನ
,, ,, ೧೨ ಶನಿವಾರ 20-2-82 ಗಜವಾಹನ ಮತ್ತು ನಂದಿವಾಹನ
,, ,, ೧೩ ಭಾನುವಾರ 21-2-82 ಹುತ್ತದವಾಹನ ಮತ್ತು ಶೇಷವಾಹನ
,, ,, ೧೪ ಸೋಮವಾರ 22-2-82 ಮಹಾಶಿವರಾತ್ರಿ ಪೂಜಾದಿಗಳು ನವಿಲುವಾಹನ ಮತ್ತು ತೆಪ್ಪೋತ್ಸವ
,, ● ೩೦ ಮಂಗಳವಾರ 23-2-82 ಪಂಚಬ್ರಹ್ಮೋತ್ಸವ

ಮತ್ತು ಮಾಮೂಲಿನಂತೆ ಎತ್ತಿನ ಪರಿಷೆಯೂ, 19-2-82 ನೇ ಶುಕ್ರವಾರ 'ದನಗಳ ಪ್ರದರ್ಶನವೂ' "ವ್ಯವಸಾಯ ಮತ್ತು ಕೈಗಾರಿಕಾ ವಸ್ತುಪ್ರದರ್ಶನವೂ" ನಡೆಯುವಂತೆ ಏರ್ಪಾಟು ಮಾಡಲಾಗಿದೆ.

ಸರ್ವರೂ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಕೃಪೆಗೆ ಪಾತ್ರರಾಗಬೇಕಾಗಿ ಅಪೇಕ್ಷಿಸುತ್ತೇನೆ.

ಶ್ರೀ ಸಿದ್ಧಗಂಗಾ ಕ್ಷೇತ್ರ

ಶ್ರೀ ಶ್ರೀ ಸ್ವಾಮಿಗಳು


# ಸಿದ್ಧಗಂಗಾ


ಸಂಪುಟ–೧೮ ಸಂಚಿಕೆ–೧ ಜನವರಿ, ೧೯೮೨


ಭವಾಂಭೋಧಿನಾವಂ ಸದಾಶುದ್ಧಭಾವಂ
ಶಿವಂ ಶಾಂತಮೇಕಂ ಪರಿತ್ರಾತಲೋಕಂ ।
ಶಿವಾನಂದಲಿಂಗಂ ಶಿವಾದ್ವೈತಲಿಂಗಂ
ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥

§§ §§ §§ §§

ಕುಲಮದವಳಿಯದನ್ನಕ್ಕ ಶರಣನಾಗಲೇಕೆ ?
ವಿಧಿವಶ ಬಿಡದನ್ನಕ್ಕ ಭಕ್ತನಾಗಲೇಕೆ ?
ನೆಲನೊಂದೆ ಹೊಲಗೇರಿ ಶಿವಾಲಯಕೆ,
ಜಲವೊಂದೆ ಶೌಚ ಮಜ್ಜನಕೆ
ಕುಲವೊಂದೆ ತನ್ನ ತಾನರಿದವಂಗೆ,
ಫಲವೊಂದೆ ಷಡುದರುಶನ ಮುಕ್ತಿಗೆ,
ನಿಲವೊಂದೆ ಕೂಡಲ ಸಂಗಮದೇವಾ ನಿಮ್ಮನರಿದವಂಗೆ

—ಬಸವಣ್ಣ

# ಈ ಸಂಚಿಕೆಯಲ್ಲಿ



### ಚಂದಾದಾರರಲ್ಲಿ ವಿನಂತಿ

1982 ನೆಯ ವರ್ಷದ ಚಂದಾ ನಂಬರ್ ಗುರುತಿಸಿಕೊಳ್ಳಿ. ವಿಳಾಸ ಬದಲಾವಣೆ ಮುಂತಾದ ವಿಚಾರಗಳಲ್ಲಿ ನಮ್ಮೊಡನೆ ವ್ಯವಹರಿಸುವಾಗ ತಮ್ಮ ಚಂದಾ ನಂಬರ್ ಮತ್ತು ನಮ್ಮ ಪ್ರತಿನಿಧಿಗಳ ಹೆಸರನ್ನು ಬರೆಯುವುದನ್ನು ಮರೆಯಬೇಡಿ. ಚಂದಾ ಬಾಕಿ ಇರುವವರು ಸಂದಾಯಮಾಡಿ, ಸದಸ್ಯತ್ವವನ್ನು ಮುಂದುವರಿಸಿಕೊಂಡು 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿರಿ. ಸಿದ್ಧಗಂಗಾ ತರಿಸಿಕೊಳ್ಳುವಂತೆ ತಮ್ಮ ಬಂಧು ಮಿತ್ರರು ಮತ್ತು ಹಿತೈಷಿಗಳನ್ನು ಪ್ರೋತ್ಸಾಹಿಸಿ.



# ಶ್ರೀವಾಣಿ

ಒಮ್ಮೆ ಸ್ವಾಮಿ ವಿವೇಕಾನಂದರ ಬಳಿ ಓರ್ವ ಪಾಶ್ಚಾತ್ಯ ಯುವಕ ಬಂದ. ಆ ಯುವಕನನ್ನು ವಿವೇಕಾನಂದರು ಪ್ರಶ್ನಿಸಿದರು, " ಮುಂದೆ ನೀನು ಏನಾಗ ಬೇಕೆಂದಿದ್ದೀಯಾ " ಯುವಕ ಕೂಡಲೆ ಉತ್ತರ ಕೊಟ್ಟ- ' ಸ್ವಾಮಿ, ನಾನು ಚೆನ್ನಾಗಿ ವ್ಯಾಸಂಗ ಮಾಡಿ ದೊಡ್ಡ ಪದವೀಧರನಾಗಬೇಕೆಂದಿದ್ದೇನೆ. ' " ಆಮೇಲೆ ? ದೊಡ್ಡ ನೌಕರಿ ಸಂಪಾದಿಸುತ್ತೇನೆ. " " ಆಮೇಲೆ " . ಮದುವೆಯಾಗಿ ಸುಖವಾಗಿ ಸಂಸಾರ ಸಾಗಿಸುತ್ತೇನೆ.' ' ಆಮೇಲೆ " ' ಚೆನ್ನಾಗಿ ದುಡಿದು ಶ್ರೀಮಂತನಾಗುತ್ತೇನೆ. ' " ಆಮೇಲೆ ? " . ನೌಕರಿಯಿಂದ ನಿವೃತ್ತನಾಗಿ ಹಾಯಾಗಿರುತ್ತೇನೆ. ' " ಆಮೇಲೆ ? " ' ಸಾಯುತ್ತೇನೆ ' " ಆಮೇಲೆ ? " ' ಏನಾಗುತ್ತೇನೊ ಗೊತ್ತಿಲ್ಲ. ' ಆಗ ವಿವೇಕಾನಂದರು ಪ್ರಶ್ನೆಯನ್ನು ನಿಲ್ಲಿಸಿ ಹೇಳಿದರಂತೆ ' ನಾನು ಪದವೀಧರನಾಗುತ್ತೇನೆ, ನೌಕರಿಹಿಡಿಯುತ್ತೇನೆ, ಸಂಸಾರಸಾಗಿಸುತ್ತೇನೆ, ಸಾಹುಕಾರನಾಗುತ್ತೇನೆ. ಸಾಯುತ್ತೇನೆ, ಎಂಬ ಲೋಕ ಸಾಮಾನ್ಯ ನಡವಳಿಕೆ. ಇದೇ ಬದುಕಿನ ಚರಮ ಗುರಿಯಲ್ಲ. ಈ ಕಾರಣ ನಾನು ಯಾರು ? ಎಲ್ಲಿಂದ ಬಂದೆ ? ಹೋಗುವುದಾದರು ಎಲ್ಲಿಗೆ? ಈ ಬದುಕಿನ ಸಾರ್ಥಕತೆಯಾದರೂ ಏನು ? ಎಂಬ ತಿಳಿವಳಿಕೆಯೇ ಮುಖ್ಯ ಎಂದರಂತೆ.

"ಸಿದ್ಧಗಂಗಾ" ಮಾಸ ಪತ್ರಿಕೆ

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

ಸಂಪಾದಕ ಮಂಡಲಿ

ಪಂ॥ ಚನ್ನಪ್ಪ ಎರೇಸೀಮೆ

ಪಿ. ಎಸ್. ಚಂದ್ರಶೇಖರಯ್ಯ

ಬಸವರಾಜು

ಎಂ. ರೇಣುಕಾರಾಧ್ಯ

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ 15-00 ರೂ

ಆಜೀವ ಸದಸ್ಯತ್ವ 151-00 ರೂ

ಪ್ರಕಾಶಕರು

'ಸಿದ್ಧಗಂಗಾ' ಮಾಸಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.





# ಸಂಪಾದಕೀಯ

"ಭಾರತಸ್ಯ ಪ್ರತಿಷ್ಠೇದ್ವೇ ಸಂಸ್ಕೃತಂ ಸಂಸ್ಕೃತಿಸ್ತಥಾ॥" ಜಗತ್ತಿನಲ್ಲಿ ಭರತ ಖಂಡದ ಪ್ರತಿಷ್ಠೆ ಹೆಚ್ಚಿರುವುದು ಎರಡರಿಂದ. ಒಂದು ಭಾರತೀಯವಾದ ಸಂಸ್ಕೃತಿ ಯಿಂದ ಮತ್ತೊಂದು ಭಾರತೀಯ ಸಂಸ್ಕೃತಿಯನ್ನೇ ಅಂತಃಸತ್ವವಾಗಿವುಳ್ಳ ಸಂಸ್ಕೃತ ಭಾಷೆಯಿಂದ. ಎಂಬುದು ಒಬ್ಬ ವಿಚಾರವಂತನ ವಾಣಿ. ಜಗತ್ತು ಭರತಖಂಡದ ಕಡೆ ಧರ್ಮಸಂದೇಶಕ್ಕಾಗಿ ಕೈ ತೋರಿಸುತ್ತಿದೆ. ಜ್ಞಾನ ರತ್ನವನ್ನು ಜಗತ್ತಿಗೆ ನೀಡಿದ್ದು ಭಾರತೀಯ ಸಂಸ್ಕೃತಿ ಅರ್ಥಾತ್ ಸಂಸ್ಕೃತ ಭಾಷೆ. ಸಂಸ್ಕೃತ ಭಾಷೆ ಅತ್ಯಂತ ಪ್ರಾಚೀನ ಭಾಷೆ, ಮತ್ತು ಪುರಾತನ ಸಂಸ್ಕೃತಿ ಸಂಪನ್ನ ಸಂಪದ್ಭರಿತ ಭಾಷೆ. 'ಪುರಾಣಮಿತ್ಯೇವ ನಸಾಧುಸರ್ವಂ' ಎನ್ನುವ ಕಾಳಿದಾಸ ಮಹಾಕವಿಯ ಮಾತನ್ನು ನೆನಪಿಗೆ ತರುತ್ತಾ, ಪುರಾತನವಾದದ್ದೆಲ್ಲವೂ ಸಾಧುವೆಂದು ಅಂಧಪರಂಪರೆ ಇಂದಿನ ವಿಜ್ಞಾನ ಯುಗಕ್ಕೆ ಸಮಂಜಸವಲ್ಲದಿದ್ದರೂ ಪುರಾತನವೆಲ್ಲವೂ ಹಳೆಯ ಕೊಳೆ ಎನ್ನುವ ತಿರಸ್ಕಾರ ಭಾವದ ಅವಿವೇಕಕ್ಕೆ ಅವಕಾಶ ಕೊಡದೆ, ಹಳೆಯ ಸುವರ್ಣದ ಆಭರಣಕ್ಕೆ ಹೊಸ ವೈಜ್ಞಾನಿಕ ಕುಂದಣದ ಪುಟಕ್ಕಿಟ್ಟು ಮೈಯ ಮಲಿನತೆಯ ಕೊಳೆಯನ್ನು ಕಳೆಯುವುದು ವಿಚಾರವಂತರ ವೈಜ್ಞಾನಿಕ ದೃಷ್ಟಿ. ಪ್ರಪಂಚದ ಅನೇಕ ಪಂಡಿತರು, ಜ್ಞಾನಿಗಳು ಸಂಸ್ಕೃತ ಭಾಷೆಯ ಅಧ್ಯಯನ, ಆ ಭಾಷೆಯ ಜ್ಞಾನ ಸಂಪತ್ತಿನ ಪಾವಿತ್ರ್ಯತೆ, ಮಾನವೀಯತೆಯ ಮೌಲ್ಯಗಳನ್ನು ಕಂಡು ಪುರಾತನವಾದರೂ ಇಂದಿನ ಅಧ್ಯಯನದ ಆವಶ್ಯಕತೆ ಕುರಿತು ಮುಕ್ತಕಂಠದ ಪ್ರಶಂಸೆಯ ವಿಷಯ, ಹಲವು ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಜಗತ್ತಿನ ಎಲ್ಲ ಭಾಷೆಗಳಿಗೂ ಮಾತೃಸ್ಥಾನೀಯ ವಾದ, ಜ್ಞಾನಸಂಪತ್ತಿನ ಆಗರವಾದ ಮಾನವ ಕಲ್ಯಾಣದ ಪರಮ ಗಂತವ್ಯವನ್ನು ಬೋಧಿಸುವ, ಜಗತ್ತಿನ ಹಲವಾರು ಸಂಶೋಧಕರಿಗೆ ಅಚ್ಚರಿ ಮತ್ತು ಪ್ರೇರಣೆಯನ್ನು ಒದಗಿಸಿರುವ ಸಂಸ್ಕೃತಕ್ಕೆ ಭಾರತೀಯರಿಂದಲೇ ಅದರಲ್ಲೂ ಸಂಸ್ಕೃತಕ್ಕೆ ಹಿಂದಿನಿಂದಲೂ ಪೂಜ್ಯ ಸ್ಥಾನವನ್ನು ಕೊಟ್ಟದ್ದ ಕನ್ನಡನಾಡಿನವರಿಂದಲೇ ಅನ್ಯಾಯವಾಗಿದೆ ಎಂದಾಗ ನಿಜಕ್ಕೂ ಅತ್ಯಂತ ವಿಷಾದನೀಯ ಸಂಗತಿ. ಪ್ರೌಢಶಾಲೆಗಳಲ್ಲಿ ಪ್ರಥಮ ಭಾಷೆ ಯಿಂದ ತೆಗೆದದ್ದೂ ಸಾಲದೆಂದು ಸಂಸ್ಕೃತ ಭಾಷೆಯ ಬೆಳವಣಿಗೆಗೆ ವಿರೋಧವನ್ನು ವ್ಯಕ್ತಪಡಿಸುವ ಅಭಿಮಾನಿಗಳ ಪ್ರಯತ್ನ ಸ್ವಾತಂತ್ರ್ಯ ಸ್ವೇಚ್ಛಾಚಾರದ ಅಮಲಿನಲ್ಲಿ ಕುಣಿಯುತ್ತಿದ್ದ, ಕುರಿಮರಿ ರಕ್ಷಣೆ ಪೋಷಣೆಯ ತಾಯ ಕಳೆದುಕೊಂಡು ತೋಳನ ವಶವಾದ ದುರ್ಗತಿ ಕನ್ನಡಕ್ಕೆ ಒದಗಬಾರದೆಂದು ಅಭಿಮಾನದ ಕಳಕಳಿ.

# ನವನೀತ

ಯಥಾ ಧೇನು ಸಹಸ್ರೇಷು ವತ್ಸೋ ವಿಂದಂತಿ ಮಾತರಂ ।
ತಥಾ ಪುರಾಕೃತಂ ಕರ್ಮ ಕರ್ತಾರಮನುಗಚ್ಛತಿ ॥

—ಪಂಚತಂತ್ರ

ಕರುವು ಸಾವಿರ ಹಸುಗಳ ಗುಂಪಿನ ಮಧ್ಯದಲ್ಲಿರುವ ತನ್ನ ತಾಯಿಯನ್ನೇ ಹೇಗೆ ಹೋಗಿ ಸೇರುವುದೋ, ಹಾಗೆಯೇ ಹಿಂದೆ ಮಾಡಿದ ಕರ್ಮವು, ಕರ್ಮ ಮಾಡಿದವನನ್ನೇ ಅನುಸರಿಸಿ ಹೋಗುತ್ತದೆ.



ಧರ್ಮಾದರ್ಥಃ ಪ್ರಭವತೇ ಧರ್ಮಾತ್ ಪ್ರಭವತೇ ಸುಖಂ ।
ಧರ್ಮೇಣ ಲಭತೇ ಸರ್ವಂ ಧರ್ಮಸಾರಮಿದಂ ಜಗತ್ ॥

—ರಾಮಾಯಣ

ಧರ್ಮದಿಂದಲೇ ಅರ್ಥ, ಧರ್ಮದಿಂದಲೇ ಸುಖ. ಸಕಲ ಅಭೀಷ್ಟವೂ ಧರ್ಮದಿಂದ ಕೈಗೂಡುತ್ತದೆ. ಈ ಜಗತ್ತು ಧರ್ಮದ ತಳಹದಿಯ ಮೇಲೆ ನಿಂತಿದೆ.



ಸಂತುಷ್ಟೋ ಭಾರ್ಯಯಾ ಭರ್ತಾ ಭರ್ತ್ರಾ ಭಾರ್ಯಾ ತಥೈವ ಚ ।
ಯಸ್ಮಿನ್ನೇವ ಕುಲೇ ನಿತ್ಯಂ ಕಲ್ಯಾಣಂ ತತ್ರವೈ ಧ್ರುವಮ್ ॥

—ಮನುಸ್ಮೃತಿ

ಯಾವ ಕುಟುಂಬದಲ್ಲಿ ಗಂಡನಿಂದ ಹೆಂಡತಿಯೂ, ಹೆಂಡತಿಯಿಂದ ಗಂಡನೂ ತೃಪ್ತರಾಗಿ ಆನಂದವನ್ನು ಪಡೆಯುತ್ತಾರೆಯೋ, ಅಲ್ಲಿ ಯಾವಾಗಲೂ ಮಂಗಳವುಂಟಾಗುತ್ತದೆ.



# ಚಿಂತನ

—ಟಿ. ಆರ್. ಮಹಾದೇವಯ್ಯ

ಒಬ್ಬ ವಿದ್ಯಾರ್ಥಿ ತಾನು ಓದುವ ವಿಶ್ವವಿದ್ಯಾನಿಲಯದಲ್ಲಿ ಕ್ಲುಪ್ತವಾದ ಪದವಿ ಶಿಕ್ಷಣವನ್ನು ಮುಗಿಸಿ ಗೊತ್ತುಪಡಿಸಿದ ಪರೀಕ್ಷೆಯಲ್ಲಿ ಬರೆದು ತೇರ್ಗಡೆಯಾದ ನಂತರ ಪದವೀಧರನೆನಿಸಿಕೊಳ್ಳುತ್ತಾನೆ. ಸಾಂಪ್ರದಾಯಿಕವಾಗಿ ನಡೆಯುವ ಘಟಕೋತ್ಸವದಲ್ಲಿ ಅವನಿಗೆ ಪದವೀ ದಾನವಾಗುತ್ತದೆ. ಅವನ ಹೆಸರು ಬೆಳೆಯುತ್ತದೆ. ಅಂದರೆ ಅವನ ಹೆಸರಿನ ಮುಂದೆ ಬಿ.ಎ. ಎಂದು ಎರಡಕ್ಷರವೋ, ಬಿ.ಎಸ್.ಸಿ. ಎಂದು ಮೂರಕ್ಷರವೋ, ಬಿ.ಕಾಂ. ಅಥವಾ ಎಂ.ಬಿ.ಬಿ.ಎಸ್. ಎಂದು ನಾಲ್ಕು ಅಕ್ಷರಗಳೋ ಸೇರುತ್ತವೆ. ಅವನ ದರ್ಜೆ ಏರುತ್ತದೆ. ತಾನು ಯಾವುದೋ ನಿರ್ದಿಷ್ಟ ವಿಷಯವನ್ನು ಆರಿಸಿಕೊಂಡು ವರ್ಷಗಟ್ಟಲೆ ಪಾಠ ಕೇಳಿ, ಕಾರ್ಯಾಗಾರದಲ್ಲಿ ಪ್ರಯೋಗ ನಡೆಸಿ ಗ್ರಂಥಾಧ್ಯಯನಮಾಡಿ, ಸ್ವತಃ ಚಿಂತನಶೀಲನಾಗಿ ಆರ್ಜಿಸಿಕೊಂಡ ಜ್ಞಾನಗಳಿಕೆಯ ಪ್ರತೀಕವಾಗಿ ವಿಶ್ವವಿದ್ಯಾನಿಲಯ ಆ ಬಳುವಳಿಯನ್ನು ನೀಡುತ್ತದೆ. ಅದು ಆತ ಜೀವನೋಪಾಯಕ್ಕೆ ಒಂದು ಉದ್ಯೋಗವನ್ನು ದೊರಕಿಸಿಕೊಳ್ಳುವ ಯೋಗ್ಯತಾಪತ್ರವೂ ಆಗುತ್ತದೆ.

ತಾನು ಗಳಿಸಿದ ವಿದ್ಯೆಯನ್ನು ತನ್ನ ಔದ್ಯೋಗಿಕ ಜೀವನದಲ್ಲಿ ಬಳಸಿಕೊಳ್ಳುವ ಬೆಳೆಸಿಕೊಳ್ಳುವ ಯೋಗ ದೊರಕಿದವನು ನಿಜಕ್ಕೂ ಧನ್ಯ. ಕಲಿಸುತ್ತಾ ಕಲಿಯುವ ಅಥವಾ ಮಾಡುತ್ತಾ ರೂಢಿಸಿಕೊಳ್ಳುವ ನೌಕರಿ ಪುರುಷಾರ್ಥಸಾಧಕವಾಗುತ್ತದೆ. ಆದರೆ ಎಲ್ಲ ಸಂದರ್ಭಗಳಲ್ಲೂ ಹಾಗಾಗುವುದಿಲ್ಲ. ಕನ್ನಡ ಭಾಷೆಯನ್ನೋ, ಇತಿಹಾಸವನ್ನೋ ಅಭ್ಯಾಸಮಾಡಿ ಪದವೀಧರನಾದವನು ಬ್ಯಾಂಕಿನ ನೌಕರನಾಗಿ ಹಣಕಾಸಿನ ವಹಿವಾಟಿನಲ್ಲಿ ತೊಡಗುತ್ತಾನೆ. ರಸಾಯನಶಾಸ್ತ್ರ, ಜೀವಶಾಸ್ತ್ರ ಮೊದಲಾದ ವಿಜ್ಞಾನ ವಿಷಯಗಳನ್ನು ಕಲಿತ ವಿದ್ಯಾರ್ಥಿ ಕಛೇರಿಯೊಂದರಲ್ಲಿ — ಗೆ, — ಯಿಂದ ನೋಡಿಕೊಳ್ಳುವ ಗುಮಾಸ್ತನಾಗುತ್ತಾನೆ. ಇಲ್ಲಿ ಅವರು ಕಲಿತದ್ದು ಎಷ್ಟರಮಟ್ಟಿಗೆ ಉಪಯೋಗವಾಗುತ್ತದೆ ? ಜೀವನದಲ್ಲಿ ಇಂಥ ಅಸಂಗತಗಳು ನಡೆದೇ ಇರುತ್ತವೆ. ನಿರುದ್ಯೋಗ ಸಮಸ್ಯೆ ತಾಂಡವಾಡುತ್ತಿರುವ ಈಗಿನ ಪರಿಸ್ಥಿತಿಯಲ್ಲಿ ಅರ್ಹತೆಗೆ ತಕ್ಕ ಹುದ್ದೆ. ಎಂಬ ಮಾತಿಗೆ ಅರ್ಥವೇ ಇಲ್ಲವಾಗಿದೆ, ಆ ಮಾತು ಹಾಗಿರಲಿ.

ಪದವಿಯನ್ನು ಪಡೆದ ಪದವೀಧರ ಸಾಮಾನ್ಯವಾಗಿ ತನ್ನ ಕೆಲಸ ಮುಗಿಯಿತು ಎಂದು ಭಾವಿಸುತ್ತಾನೆ. ಅಭ್ಯಾಸಕ್ಕೆ ಇತಿ ಶ್ರೀ ಹಾಡಿಬಿಡುತ್ತಾನೆ. 'ಪರೀಕ್ಷೆಗಾಗಿಯೇ

( 51 ನೇ ಪುಟ ನೋಡಿ )

# ಕ್ಷೇತ್ರವಾರ್ತೆ

—ಪಿ. ಎಸ್. ಚಂದ್ರಶೇಖರಯ್ಯ

ದಿನಾಂಕ 26-12-81ರಂದು ಕನ್ನಡನಾಡಿನ ಖ್ಯಾತ ಚಿತ್ರನಟ ನಟಸಾರ್ವಭೌಮ ಶ್ರೀ ಡಾ॥ ರಾಜಕುಮಾರರವರು ತಮ್ಮ ಕುಟುಂಬದವರೊಂದಿಗೆ ಶ್ರೀ ಕ್ಷೇತ್ರಕ್ಕೆ ಭೇಟಿನೀಡಿದ್ದರು. ಸ್ವಯಂ ಪ್ರೇರಣೆಯಿಂದ ಶ್ರೀ ಕ್ಷೇತ್ರದ ದಾಸೋಹಕ್ಕೆ 10,001 ರೂಪಾಯಿಗಳ ಕಾಣಿಕೆಯನ್ನು ಕೊಟ್ಟು ಶ್ರೀ ಶ್ರೀಗಳವರ ಆಶೀರ್ವಾದವನ್ನು ಪಡೆದರು. ಶ್ರೀಯುತರು ವಿದ್ಯಾರ್ಥಿಗಳನ್ನುದ್ದೇಶಿಸಿ ಮಾತನಾಡುತ್ತಾ, ಶ್ರೀ ಕ್ಷೇತ್ರದಲ್ಲಿ ಶ್ರೀ ಶ್ರೀ ಸ್ವಾಮೀಜಿಯವರ ದರ್ಶನ, ಉಪದೇಶದ ಭಾಗ್ಯವನ್ನು ದಿನನಿತ್ಯವೂ ಕೇಳುತ್ತಿರುವ ನೀವು ಪುಣ್ಯವಂತರು. ಪುಣ್ಯಪುರುಷರೊಬ್ಬರ ಆದರ್ಶ ಜೀವನವನ್ನು ಪ್ರತ್ಯಕ್ಷವಾಗಿ ಕಂಡ ನೀವು ನಿಜಕ್ಕೂ ಭಾಗ್ಯಶಾಲಿಗಳು. ನಾವುಗಳು ದೇವರು ಎಲ್ಲಿದ್ದಾನೆಂದು ಎಲ್ಲ ಕಡೆಯೂ ಹುಡುಕುತ್ತಿದ್ದೇವೆ. ಆದರೆ ಅಂತಹ ಪ್ರತ್ಯಕ್ಷ ಪರಮಾತ್ಮ ಸ್ವರೂಪರಾದ ಪೂಜ್ಯರು ನಿಮಗೆಲ್ಲ ಆಶ್ರಯದಾತರಾಗಿರುವುದು ಅತ್ಯಂತ ಪರಮ ಸಂತೋಷ. ಪೂಜ್ಯರ ಆಶೀರ್ವಾದವನ್ನು ಪಡೆದಿರುವ ನೀವುಗಳು ಜೀವನದಲ್ಲಿ ಉತ್ತಮ ಸ್ಥಾನಗಳನ್ನು ಗಳಿಸಿಕೊಂಡು ತಮಗೆ ಆಶ್ರಯ ಕೊಟ್ಟ ಸಂಸ್ಥೆಗೆ ಮತ್ತು ನಿಮ್ಮ ತಾಯಿತಂದೆಯರಿಗೆ ಕೀರ್ತಿ ತರುವವರಾಗಿರಿ. ಶ್ರದ್ಧೆಯಿಂದ ಸಾಧನೆ ಮಾಡಿದರೆ ಜೀವನದಲ್ಲಿ ಯಶಸ್ಸನ್ನು ಕಾಣುವಿರಿ ಮತ್ತು ನೀವೆಲ್ಲರೂ ರಾಜಕುಮಾರರೇ ಆಗುವಿರೆಂಬ ಹಾಸ್ಯ ಚಟಾಕಿಯನ್ನು ಹಾರಿಸಿ ಒಂದು ದಾಸರ ಕೀರ್ತನೆಯನ್ನು ಹಾಡಿ, ಪೂಜ್ಯರಿಗೆ ವಂದಿಸಿ ಮುಕ್ತಾಯ ಮಾಡಿದರು. ಅವರ ಮಗ ಮಾಸ್ಟರ್ ರಾಜಕುಮಾರ್ ಕೂಡ ಸಂಗೀತವನ್ನು ಹಾಡಿ ಆನಂದಗೊಳಿಸಿದನು.

10-1-82 ರಂದು ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ಪ್ರಾರಂಭದ ಗುದ್ದಲಿ ಪೂಜೆಯು ಶ್ರೀ ಶ್ರೀಗಳವರಿಂದ ನೆರವೇರಿತು.

ಅಂದೇ ಬೆಳಿಗ್ಗೆ 11 ಘಂಟೆಗೆ ಶ್ರೀ ಕ್ಷೇತ್ರದಲ್ಲಿ ಹಳೆಯ ವಿದ್ಯಾರ್ಥಿಗಳ ಸರ್ವ ಸದಸ್ಯರ 27ನೆಯ ವಾರ್ಷಿಕ ಮಹಾಧಿವೇಶನವು ಶ್ರೀ ಶ್ರೀಗಳವರ ದಿವ್ಯ ಅಧ್ಯಕ್ಷತೆಯಲ್ಲಿ ಸಮಾವೇಶಗೊಂಡಿತ್ತು. ಅಧಿವೇಶನವು ಅನೇಕ ವಿಷಯಗಳನ್ನು ಚರ್ಚಿಸಿ ನಿರ್ಣಯ ಕೈಗೊಂಡಿತು. 82ರ ಏಪ್ರಿಲ್ ಕೊನೆಯ ವಾರದಲ್ಲಿ ನಡೆಯುವ ಶ್ರೀ ಶ್ರೀಗಳವರ ಸುವರ್ಣ ಮಹೋತ್ಸವಕ್ಕೆ ನಿಧಿ ಸಂಗ್ರಹಿಸುವ ವಿಷಯದಲ್ಲಿ ಪಟ್ಟ ಮಾಡಿದ್ದ

( 52ಪುಟ ನೋಡಿ )



# ಅಷ್ಟಾಂಗಯೋಗ ಹಾಗೂ ಶಿವಯೋಗ

—ಶ್ರೀ ಶ್ರೀ ಕುಮಾರ ಸ್ವಾಮಿಗಳು ನವಕಲ್ಯಾಣ ಮಠ, ಧಾರವಾಡ

ಪುರಾತನ ಸೈಂಧವ ಸಂಸ್ಕೃತಿಯನ್ನು ಬಿತ್ತರಿಸುವಂತಹ ಮೊಹೇಂಜೋದಾರೊ ಹರಪ್ಪಗಳ ಅಗೆತಗಳಲ್ಲಿ ದೊರೆತ ಅವಶೇಷಗಳಿಂದ ಯೋಗಕ್ಕೆ ಒಂದು ಪ್ರಾಚೀನ ಪರಂಪರೆಯುಂಟೆಂದು ಗೊತ್ತಾಗುತ್ತದೆ. ಅಲ್ಲಿಂದ ಚಿತ್ರಲಿಪಿಗಳಲ್ಲಿ ಮೀನ್ ಕಣ್, ಮುಂಕಣ್, ಬಿಡುಗಣ್, ಓರ್‌ಕಣ್ ಈ ಪದಗಳು ದೊರೆಯುತ್ತವೆ. ಅವುಗಳಲ್ಲಿ ಮೀನ್‌ಕಣ್ ಪದವು ಬಹಳ ಮಹತ್ವದ್ದು. ಮೀನ್‌ಕಣ್ ಇದು ಅಚ್ಚಗನ್ನಡಪದ, ಇದರ ಸಂಸ್ಕೃತ ಅನುವಾದವೇ ಅನಿಮಿಷದೃಷ್ಟಿ. ಅನಿಮಿಷ ದೃಷ್ಟಿಯ ಯೋಗದಿಂದ ಆತ್ಮ ಸಾಕ್ಷಾತ್ಕಾರವನ್ನು ಪಡೆವ ವಿಧಾನ ಆಗ ಪ್ರಚಾರದಲ್ಲಿತ್ತೆಂದು ಇದರಿಂದ ಸ್ಪಷ್ಟವಾಗುತ್ತದೆ. ಇಂತಹ ಸಾಕ್ಷಾತ್ಕಾರವನ್ನು ಪಡೆದವರಿಗೆ ಮೀನರೆಂದು ಸಂಭೋಧಿಸುತ್ತಿದ್ದರು. ಇವರು ಗುಹೆಯಲ್ಲಿ ವಾಸಿಸಿ ತಪಸ್ಸನ್ನಾಚರಿಸುತ್ತಿದ್ದರೆಂದು ತಿಳಿದುಬಂದಿದೆ. ಈ ಮೀನರೇ ಶಿವಯೋಗದ ಆದ್ಯ ಪ್ರವರ್ತಕರು. ಇಂದಿಗೆ ಐದು ಸಾವಿರ ವರ್ಷಗಳ ಹಿಂದೆ ಶಿವಯೋಗವು ಅದಾವ ಸ್ವರೂಪದಲ್ಲಿತ್ತೆಂದು ಯಥಾರ್ಥವಾಗಿ ತಿಳಿದುಕೊಳ್ಳಲಿಕ್ಕೆ ಸಾಕಷ್ಟು ಸಾಧನ ಸಾಮಗ್ರಿಗಳು ನಮಗೆ ಉಪಲಬ್ಧವಿಲ್ಲ. ಆದರೆ ಇಷ್ಟು ಮಾತ್ರ ನಿಜ ಶಿವಯೋಗದ ಮುಖ್ಯ ಲಕ್ಷಣವಾದ ಅನಿಮಿಷದೃಷ್ಟಿ ಅಥವಾ ಮೀನ್‌ಕಣ್ ಒಂದು ಯೋಗವಿಧಾನವಾಗಿ ಪ್ರಚಾರದಲ್ಲಿತ್ತು. ಅನಿಮಿಷ ದೃಷ್ಟಿ ಎಂದರೆ ಅರೆತೆರೆದ ದೃಷ್ಟಿ. ಕಣ್ಣು ಪೂರ್ಣ ಮುಚ್ಚಿಯೂ ಅಲ್ಲ; ತುಂಬಾ ತೆರೆದೂ ಅಲ್ಲ. ಕಣ್ಣು ಪೂರ್ಣ ಮುಚ್ಚಿದರೆ ಅಂತರ್ಲಕ್ಷ್ಯವಾಗುವುದು, ಕಣ್ಣು ತುಂಬಾ ತೆರೆದರೆ ಬಹಿರ್ಲಕ್ಷ್ಯವಾಗುವುದು. ಅನಿಮಿಷ ದೃಷ್ಟಿಯು ದೇಹದಲಿ ದೀಪದಂತೆ ಮಧ್ಯಲಕ್ಷವನ್ನಾಶ್ರಯಿಸಿದೆ. ಇದನ್ನೆ ಪ್ರಭುದೇವರು ತಮ್ಮದೊಂದು ವಚನದಲ್ಲಿ "ಒಳ ಹೊರಗೆಂಬುದನರಿಯದೆ ಅನಿಮಿಷನಾಗಿ ರ್ದನಾಶರಣನು'' ಎಂದು ಹೇಳಿರುವರು. ಈ ಅನಿಮಿಷ ದೃಷ್ಟಿಯೇ ಮುಂದೆ ಶಾಂಭವೀ ಮುದ್ರೆಯಾಗಿ ಪರಿಣಮಿಸಿತು. 'ಕಾಣುತಿದೆ ಪರಬಿಂದು ಶಾಂಭವೀಯ ಕೋಣೆಯಲಿ ಲಕ್ಷ್ಯವಿಟ್ಟಾಕ್ಷಣದಿ'. ಇನ್ನೊಂದು ಆಶ್ಚರ್ಯದ ಮಾತೆಂದರೆ, ಈ ಮಧ್ಯಲಕ್ಷ್ಯವೆ ಸಮಾಜ ಜೀವನದಲ್ಲಿ ಮಧ್ಯಮ ಮಾರ್ಗದ ತತ್ವಜ್ಞಾನವಾಗಿ ಕಂಗೊಳಿಸಿತು—ಅದು ಬುದ್ಧನಲ್ಲಿ ಸುಳಿದೆಗೆದು ಬೆಳೆಯಿತು.

ಮೊಹೇಂಜೊದಾರೊ ಹರಪ್ಪಾಗಳ ಅಗೆತಗಳಲ್ಲಿಹಲವಾರು ಚಿತ್ರಲಿಪಿಯ ಶಾಸನಗಳು ದೊರೆತಿವೆ. ಒಂದು ಶಾಸನದಲ್ಲಿ ಹೀಗೆ ಉಲ್ಲೇಖವಿದೆ 'ಬಾನ್‌ತೇರ್ ಓರ್

ಮೀನ್‌ಕಣ್ ವೇಳ್' ಒಬ್ಬ ಮೀನಕಣ್ಣಿನವನು ಬಾನನ್ನು ಅಥವಾ ಆಗಸವನ್ನು ಮುಟ್ಟಿ ಆನಂದವನ್ನು ಪಡೆಯುವನು. ಆಗಸವನ್ನು ಮುಟ್ಟಿ ಆನಂದವನ್ನು ಪಡೆಯುವದೆಂದರೇನು ? ಅನಿಮಿಷ ದೃಷ್ಟಿಯನ್ನು ಪಡೆದ ಆಧ್ಯಾತ್ಮಯೋಗಿಗಳು ಯೋಗಬಲದಿಂದ ಬ್ರಹ್ಮರಂಧ್ರವನ್ನು ಸೇರಿ, ಸಹಸ್ರಾರದಲ್ಲಿ ನೆಲೆನಿಂದು ಪರಮಾನಂದಪಯೋನಿಧಿಯೊಳಗೋಲಾಡುವರು. ಸಿಂಧೂನದಿಯ ಕೊಳ್ಳದಲ್ಲಿ ದೊರೆತ ಅವಶೇಷಗಳಲ್ಲಿ ಆಸನಬದ್ಧರಾಗಿ ನಿಟಿಲಭ್ರೂಮಧ್ಯದಿ ನೆಟ್ಟನೋಟವುಳ್ಳ ಯೋಗಿಗಳ ಪ್ರತಿಮೆಗಳು ಉಪಲಭ್ಧವಾಗಿವೆ ಎಂಬುದನ್ನು ಗಮನಿಸಿದರೆ ಯೋಗಿಗಳ ಬಗೆಗೆ ಅಥವಾ ಯೋಗದ ಬಗೆಗೆ ಆದರಭಾವವು ಆಗಿನ ಜನಸಾಮಾನ್ಯರಲ್ಲಿತ್ತೆಂಬುದು ಸ್ಪಷ್ಟವಾಗುತ್ತದೆ. ಯೋಗಿಗಳು ಪಡೆದ ಈ ದಿವ್ಯ ದೃಷ್ಟಿಗೆ 'ಮೀನ್‌ಕಣ್' ಎಂದು ಹೆಸರು.

ಮೀನದ ವಿಷಯವಾಗಿ ವಿವೇಚನೆ ಪ್ರಾಚೀನ ಕಾಲದಿಂದಲೂ ನಡೆದಿದೆ. ಭಾರತೀಯರು ಕಲ್ಪಿಸಿರುವ ದಶಾವತಾರಗಲ್ಲಿ ಮತ್ಸ್ಯಾವತಾರವೆ ಮೊದಲನೆಯದು. ಪುರಾಣದ ಈ ಕಲ್ಪನೆಯನ್ನು ಪ್ರಾಣಿಗಳ ಜೀವನದ ಇಲ್ಲವೆ ಮಾನವ ಬುದ್ಧಿಯ ವಿಕಾಸದ ಪರವಾಗಿ ವಿವರಿಸುವದುಂಟು. ಡಾರ್ವಿನ್ನನು ಮಂಗನಿಂದ ಮಾನವನು ಉಂಟಾದನೆಂದು ಹೇಳಿದರೆ ಅಮೇರಿಕೆಯ ಡಾ|| ಟನ್ಲೆ ಎಂಬುವವನು ಈ ಸಿದ್ಧಾಂತವನ್ನು ಅಲ್ಲಗಳೆದು ಮೀನದಿಂದ ಮಾನವನು "ಉದಯಿಸಿದನೆಂದು ಪ್ರತಿಪಾದನೆ ಮಾಡಿದ್ದಾನೆ. ಮಾನವಾವತಾರದ ಕಲ್ಪನೆಗೆ ಮತ್ಸ್ಯಾವತಾರವೆ ಮೊದಲು ಎಂಬ ಪೌರಾಣಿಕ ಕಲ್ಪನೆಗೆ ಈ ಮಾತಿನಿಂದ ಪುಷ್ಟಿ ದೊರೆಯುತ್ತದೆ.

ಪ್ರಾಣಿಶಾಸ್ತ್ರದ ವಿಚಾರವು ಏನೇ ಇರಲಿ, ಮೀನ ಪ್ರಪಂಚದ ಮಥಿತಾರ್ಥವನ್ನು ಯೋಗಿಗಳು ಬೇರೆಯೊಂದು ರೀತಿಯಿಂದ ಕಂಡುಹಿಡಿದಿದ್ದಾರೆ. ನೀರಿನಲ್ಲಿಯ ಮೀನವು ತತ್ತಿಯನ್ನಿಟ್ಟು ಗಾಢವಾದ ಪ್ರೇಮದಿಂದ ಅದನ್ನು ನೋಡುವುದು—ಆಗ ಅದರಿಂದ ಮರಿಗಳು ಹೊರಬೀಳುವವು. ತಾಯಿಯು ಕಟ್ಟೆಳ್ಳರಿಂದ ಕಂಡಾಗ ತತ್ತಿಯೊಡೆದು ಮೀನದ ಮರಿಯು ಹೊರಗೆ ಬರುವದೆಂಬ ಮಾತಿನಲ್ಲಿ ಪ್ರೇಮದೃಷ್ಟಿಯೆ ಜೀವನಾಧಾರವೆಂಬ ರಹಸ್ಯವಡಗಿದೆ. ಪ್ರಪಂಚಕ್ಕೆ ಒಂದೇ ಮೂಲವಲ್ಲ, ಒಲವು ಮೂಲವಾಗಿದೆ. ಒಲವು ಪ್ರಪಂಚದ ಜೀವಾಳ, ಈ ಒಲವಿನಲ್ಲಿ, ಈ ಪ್ರೇಮದಲ್ಲಿ ಜೀವನದ ಸಾಮರಸ್ಯವಿದೆ. ಈ ಒಲವಿಗೆ ಈ ಕಡುನೇಹದ ನೋಟಕ್ಕೆ ಆ ನಿಮಿಷದೃಷ್ಟಿ ಅಥವಾ ಮೀನ್ ಕಣ್ಣೆಂದು ಹೆಸರು. ಮೀನದ ಈ ಉಪಮೆಯನ್ನೆ ಇದಿರಿಟ್ಟುಕೊಂಡು ಶ್ರೀ ಗುರು ನೋಟ ಮಾತ್ರದಿಂದ ಶಿಷ್ಯನಿಗೆ ಶಕ್ತಿಪಾತವನ್ನು ಮಾಡಬಲ್ಲನೆಂಬ ಪ್ರತೀತಿಯು ಯೋಗಶಾಸ್ತ್ರದಲ್ಲಿ ರೂಢವಾಗಿದೆ.

ಅಲ್ಲಮ ಪ್ರಭುದೇವರು ಅನಿಮಿಷ ಯೋಗದಿಂದ ಅದೆಂತಹ ಉನ್ನತವಾದ ಆಧ್ಯಾತ್ಮಿಕ ನಿಲುವನ್ನು ಪಡೆದಿದ್ದರೆಂಬುದು ಶೂನ್ಯ ಸಂಪಾದನೆಯಲ್ಲಿ ಕಾಣುವ ಅನಿಮಿಷಯ್ಯನ ವರ್ಣನೆಯಿಂದ ದೃಗ್ಗೋಚರವಾಗುತ್ತದೆ.



"ಅಂತರಂಗದೊಳು ಗುರುಭಾವ ತಲೆದೋರುತಿರ್ಪ ಅಲ್ಲಮಪ್ರಭುದೇವರು ತಮ್ಮ ಮೂಲಜ್ಞಾನದಿಂದ ಅನಿಮಿಷದೇವರ ಸಮಾಧಿಯನ್ನು ಕಂಡು ಒಳಪೊಕ್ಕು ನೋಳ್ಪಾಗಳು ಒಂದು ದೀಪ್ತಿ ಬೆಳಗುತ್ತಿರೆ ಕಂಡು, ಸ್ವಸ್ಥಪದ್ಮಾಸನದಲ್ಲಿ ಕುಳ್ಳಿರ್ದು, ಕರಸ್ಥಳದೊಳು ಅಮೃತಲಿಂಗಮಮಂ ಪಿಡಿದು, ಆ ಲಿಂಗದೊಳು ಆಲಿಂಗನಮಾಗಿ, ಕರಣಂಗಳೆನ್ನ ನಿಃಕರಣವನ್ನೈದಿ, ಭಾವನಿರ್ಭಾವದೋಳ್‌ನಿಂದು, ನೋಟನೆಟ್ಟು ದೃಷ್ಟಿನೈಷ್ಟಿಸಿ, ಎವೆಹಳಚದೆ ಅರಿವು ಕರಿಗೊಂಡು, ತಾನೆಂಬುದು ತರಹರವಾಗಿ, ನೀನೆಂಬುದು ನಿಃಪತಿಯಾಗಿ, ಉಭಯ ಸಂದು ಅಡಗಿ ಸ್ವಯವಾಗಿ, ಮನೋಲಯ ಸ್ಥಾನದೊಳು ಸರ್ವ ಚೈತನ್ಯವನ್ನೈದಿ, ತನುಪರಮಕಾಷ್ಠಿಯೊಳು ಪರವಶವಾಗಿ, ತನ್ನ ನಿಜ ಸಮಾಧಿಯೊಳು ಮೂರ್ತಿಗೊಂಡಿರ್ಪ ಆ ಸದ್ಗುರುವಂ ಕಂಡು" ಈ ವಚನದಲ್ಲಿ ಮೀನಕಣ್ಣಿನ ನಿಲವು ವ್ಯಕ್ತವಾಗುವದಲ್ಲದೆ ವೀರಶೈವರು ಕರಸ್ಥಲದಿ ಲಿಂಗಪಿಡಿದು ಸಂಪಾದಿಸಿದ ಶಿವಯೋಗದ ರಹಸ್ಯವು ವಿಧಿತವಾಗುವದು.

ಭಾರತೀಯ ತತ್ವಶಾಸ್ತ್ರದಲ್ಲಿ ಷಡ್ದರ್ಶನಗಳಿಗೆ ಒಂದು ಮಹತ್ವದ ಸ್ಥಾನವಿದೆ. ಆ ದರ್ಶನಗಳಲ್ಲಿ ಒಂದಾದ ಪಾತಾಂಜಲಯೋಗ ಸೂತ್ರವು ಅಷ್ಟಾಂಗಯೋಗವನ್ನು ಕುರಿತು ವಿವೇಚಿಸುತ್ತದೆ. ಆ ದರ್ಶನದಲ್ಲಿ ೧೯೫ ಸೂತ್ರಗಳಿರುತ್ತವೆ. ಸಮಾಧಿಪಾದ, ಸಾಧನಾಪಾದ, ವಿಭೂತಿಪಾದ ಮತ್ತು ಕೈವಲ್ಯಪಾದವೆಂಬ ನಾಲ್ಕು ಪಾದಗಳಲ್ಲಿ ಈ ಸೂತ್ರಗಳನ್ನು ವಿಭಾಗಿಸಲಾಗಿದೆ.

ಯೋಗವೆಂದರೆ ಚಿತ್ತಾವೃತಿ ನಿರೋಧವೆಂದು ವ್ಯಾಖ್ಯೆ ಮಾಡಲಾಗಿದೆ. ಪ್ರಮಾಣಾದಿ ವೃತ್ತಿಗಳಿಗೆ ವಶವರ್ತಿಯಾದ ಕಾರಣ ದೃಷ್ಟಾ ಅಥವಾ ಆತ್ಮನು ವೃತ್ತಿ ಸಾರೂಪ್ಯವನ್ನು ಹೊಂದುತ್ತಾನೆ. ಅದರಿಂದಾಗಿ ಅವನು ಬಂಧನಕ್ಕೊಳಗಾಗುತ್ತಾನೆ. ವೃತ್ತಿಗಳನ್ನು ನಿರೋಧಿಸುವದರಿಂದ ವೃತ್ತಿ ಸಾರೂಪ್ಯದ ನಿರೋಧವೂ ಲಭಿಸುತ್ತದೆ. ಆಗ ಆತ್ಮನು ತನ್ನ ಸ್ವರೂಪ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ. ಈ ಸ್ವರೂಪ ಸಾಕ್ಷಾತ್ಕಾರಕ್ಕೇ ಯೋಗವೆಂದು ಹೆಸರು. ಅಭ್ಯಾಸ ವೈರಾಗ್ಯಗಳು ವೃತ್ತಿಯನ್ನು ನಿರೋಧಿಸುವ ಉಪಾಯಗಳಾಗಿವೆ. ಅಭ್ಯಾಸ ಕಾಲದಲ್ಲಿ ಉತ್ತರೋತ್ತರ ಶ್ರದ್ಧಾ, ವೀರ್ಯ, ಸ್ಮೃತಿ ಹಾಗೂ ಪ್ರಜ್ಞೆ ಇವು ಅಭಿವ್ಯಕ್ತಿಯುಂಟಾಗುತ್ತದೆ. ಉತ್ಕಟವಾದ ಇಚ್ಛೆಯುಳ್ಳ ಸಾಧಕನೇ ಯೋಗಾಭ್ಯಾಸದ ಅಧಿಕಾರಿಯಾಗಬಲ್ಲನು. ಅಭ್ಯಾಸ ವೈರಾಗ್ಯಗಳಿಂದ ವೃತ್ತಿಗಳ ನಿರೋಧವು ಲಭಿಸುವಂತೆ ಈಶ್ವರ ಭಕ್ತಿಯಿಂದಲೂ ಅದು ಲಭಿಸುತ್ತದೆ, ಪಂಚ ಕ್ಲೇಶಾದಿಗಳಿಲ್ಲದ ಪುರುಷ ವಿಶೇಷನು ಈಶ್ವರನು. ಅದನು ಎಲ್ಲಥರ ಆಧಾರವಾಗಿದ್ದು ಕಾಲಾತೀತನಾಗಿದ್ದಾನೆ. ಓಂಕಾರವು ಇಂತಹ ಈಶ್ವರವಾಚಕ ಶಬ್ದವಾಗಿದೆ. ಓಂಕಾರ ಅಥವ ಪ್ರಣವವನ್ನು ಭಾವಪೂರ್ಣವಾಗಿ ಜಪಿಸುವದರಿಂದ ಈಶ್ವರ ಸಾಕ್ಷಾತ್ಕಾರವಾಗುತ್ತದೆ. ಸಾಧನ ಕಾಲದಲ್ಲಿ ರೋಗ ರಂಜಿನಗಳು ಇನ್ನಿತರ ಅಡೆತಡೆಗಳು

ಚಿತ್ತವನ್ನು ವಿಕ್ಷೇಪಗೊಳಿಸುತ್ತವೆ. ಈ ಅಡೆತಡೆಗಳ ನಿವಾರಣೆಗಾಗಿ ಏಕತತ್ವದ
ಅಭ್ಯಾಸದ ಅವಶ್ಯಕತೆ ಇದೆ. ಮೈತ್ರಿ, ಕರುಣಾ, ಮುದಿತಾ, ಉದೇಷಾದಿ ಭಾವನೆ
ಗಳಿಂದ, ಪ್ರಾಣಾಯಾಮದಿಂದ, ಸತ್ಪುರುಷರ ಸ್ಮರಣದಿಂದ, ಸ್ವಪ್ನ ಹಾಗೂ ನಿದ್ರೆಗಳ
ಯಥಾರ್ಥವಾದ ಜ್ಞಾನದಿಂದ ಇವುಗಳಲ್ಲಿ ಯಾವುದಾದರೊಂದರ ಸಹಾಯದಿಂದಲಾ
ದರೂ ಚಿತ್ತವು ಪ್ರಸನ್ನವಾಗುತ್ತವೆ. ಅಲ್ಲದೆ ಅಡೆ ತಡೆಗಳು ಮಾಯವಾಗುತ್ತವೆ. ಸಾಧ
ನೆಯ ಕಾಲದಲ್ಲಿ ಉತ್ತರೋತ್ತರ ಪ್ರಗತಿಯಾಗುತ್ತ ಹೋದಂತೆ ಅಲೌಕಿಕ ವಿಷಯಗಳ
ಜ್ಞಾನವಾಗುವದು. ಆ ಅಲೌಕಿಕ ವಿಷಯಗಳಲ್ಲಿ ನೆಲೆನಿಲ್ಲದೆ ಸಾಧನ ಮುಂದುವರೆ
ಯುತ್ತ ಹೋದರೆ ಆತ್ಮ ಸಾಕ್ಷಾತ್ಕಾರವು ಸಂಭವಿಸುವದು. ಅಲೌಕಿಕ ವಿಷಯಗಳ
ಸಾಕ್ಷಾತ್ಕಾರವೆ ಸಬೀಜ ಅಥವಾ ಸಂಪ್ರಜ್ಞಾತ ಸಮಾಧಿ ಎಂದೂ, ಆತ್ಮ ಸಾಕ್ಷಾತ್ಕಾ
ರವೆ ನಿರ್ಬೀಜ ಅಥವಾ ಅಸಂಪ್ರಜ್ಞಾತ ಸಮಾಧಿ ಎಂದೂ ಹೇಳಲ್ಪಡುವದು.

ಪತಂಜಲ ಪ್ರಣೀತ ಯೋಗದರ್ಶನವು ಹಿರಣ್ಯಗರ್ಭದಿಂದ ಉಪದೇಶಿಸಲಾದ
ಯೋಗಶಾಸ್ತ್ರವೆಂದು ಪರಿಗಣಿಸಲ್ಪಡುತ್ತದೆ. ಹಿರಣ್ಯಗರ್ಭನು ಪತಂಜಲಿಗಿಂತ ಪೂರ್ವ
ದವನಾದರೂ ಆದೆಷ್ಟು ಶತಮಾನಗಳಿಂದ ಪೂರ್ವದವರೆಂದು ನಿರ್ದಿಷ್ಟವಾಗಿ ಹೇಳಲು
ಬರುವಂತಿಲ್ಲ. ಹಿರಣ್ಯ ಗರ್ಭನು ಯೋಗ ಸೂತ್ರಗಳನ್ನು ರಚಿಸಿದ್ದನೆಂದೂ ಆ ಸೂತ್ರ
ಗಳು ಇಂದು ನಮಗೆ ಉಪಲಬ್ಧವಿಲ್ಲದಿದ್ದರೂ ಪತಂಜಲಿಯ ಕಾಲಕ್ಕೆ ಅವು ಉಪಲಬ್ಧ
ವಿದ್ದವೆಂದೂ ಪತಂಜಲಿಯು ಅವುಗಳನ್ನು ಆದರಿಸಿಯೇ ತನ್ನ ಅಷ್ಟಾಂಗಯೋಗ
ದರ್ಶನವನ್ನು ರಚಿಸಿದನೆಂದೂ ಪಂಡಿತರ ಅಭಿಪ್ರಾಯವಿದೆ. ತೈತ್ತರೀಯ ಉಪನಿಷತ್ತಿ
ನಲ್ಲಿ ಪ್ರಾಚೀನ ಯೋಗದ ಉಲ್ಲೇಖವಿದೆ ಈ ಪ್ರಾಚೀನಯೋಗವು ಹಿರಣ್ಯ ಗರ್ಭನ
ಯೋಗವೆಂದೇ ನಿಷ್ಕರ್ಷೆಯಾದರೆ ಹಿರಣ್ಯಗರ್ಬನ ಯೋಗಕ್ಕೆ ಮೂರು ಸಾವಿರ ವರ್ಷ
ಗಳ ಪ್ರಾಚಿನತೆ ಇಂದ್ದಂತಾಗುತ್ತದೆ.

ಯಮ, ನಿಯಮ, ಅಸನ, ಪ್ರಾಣಾಯಾಮ, ಪ್ರತ್ಯಾಹರ, ಧಾರಣಾ,
ಧ್ಯಾನ, ಸಮಾಧಿ-ಇವೇ ಯೋಗದ ಅಷ್ಟಾಂಗಗಳು ಇವುಗಳಲ್ಲಿ ಯಮ, ನಿಯಮ,
ಆಸನ, ಪ್ರಾಣಾಯಾಮ, ಪ್ರತ್ಯಾಹಾರ ಇವು ಐದು ಬಾಹ್ಯವೆಂದೂ, ಧಾರಣಾ,
ಧ್ಯಾನ, ಸಮಾಧಿ, ಈ ಮೂರು ಅಭ್ಯಾಂತರವೆಂದೂ ವಿಭಾಗಿಸಲಾಗಿದೆ. ಅಭ್ಯಂತರ
ಅಂಗಗಳಾದ ಧಾರಣಾ, ಧ್ಯಾನ, ಸಮಾಧಿ ಈ ಮೂರನ್ನು ಶಿವಯೋಗವು ಆತ್ಮಸಾತ್
ಮಾಡಿಕೊಂಡಿದೆ. ಪತಂಜಲಿಗನುಸಾರವಾಗಿ ಧಾರಣೆ ಎಂಡರೆ ದೇಶಬಂಧ ಚಿತ್ತಸ್ಯ
ಧಾರಣಾ. ದೇಹದ ಯಾವುದಾದರೊಂದು ಭಾಗದಲ್ಲಿಯಾಗಲಿ (ಭ್ರೂಮಧ್ಯ, ನಾಸಿ
ಕಾಗ್ರ, ಹೃದಯ ಇತ್ಯಾದಿ) ಇಲ್ಲವೆ ದೇಹದಿಂದ ವ್ಯತಿರಿಕ್ತವಾದ ಯಾವುದಾದರೊಂದು
ವಸ್ತುವಿನ ಮೇಲಾಗಲಿ ಲಕ್ಷ್ಯವನ್ನು ಕೇಂದ್ರೀಕರಿಸುವದೇ ಧಾರಣೆ. ಆದರೆ ಶಿವಯೋಗ
ದಲ್ಲಿ ಲಿಂಗವನ್ನು ಧರಿಸುವದೇ ಧಾರಣೆ. ಹೀಗೆ ಧರಿಸಿದ ಲಿಂಗವನ್ನು ಕರಸ್ಥದಲಿಟ್ಟು



ನಿರ್ನಿಮಿಷ ದೃಷ್ಟಿಯಿಂದ ನಿರೀಕ್ಷಿಸುವುದೇ ಧ್ಯಾನ. ಈ ಅವಿರಳ ಧ್ಯಾನದಿಂದ ಇಂದ್ರಿ
ಯಂಗಳಿಗಾವರಿಸಿ ತಮಸ್ ಅಳಿದು ತೇಜಸ್ಸು ಬೆಳಗಲಮವಾಗುವದು, ಅರೆಮುಗಿದ
ಕಣ್ಗಳೆರಡರ ತಾರೆಗಳ ನಡುವೆ-ತರಣಿ ಶಶಿ ಶಿಖಿಬಿಂಬ ಸೂಕ್ಷ್ಮರಂಧ್ರದೊಳು-ಪೇರ
ಪೊಣ್ಮೆ ಕೋಟಿ ಮಿಂಚುಗಳಂತೆ ಝಗಝಗಿಸಿ-ಮೆರೆದ ಬಿಂದು ಪ್ರಭೆಯ ನೋಳ್ಪ ಸಂತ
ಸವೆ, ಈ ಬಿಂದು ಪ್ರಭೆ ಅಥವಾ ಚಿತ್ಕಳೆಯಲ್ಲಿ ಮನವಳದು ಬೆಳಗಿದ ಉನ್ಮನಿ ಜ್ಯೋತಿ
ಯಲ್ಲಿ ಒಡವರೆದು ಒಂದಾಗುವದೇ ಸಮಾಧಿ, ಶಿವಯೋಗದಲ್ಲಿ ಧಾರಣಾ, ಧ್ಯಾನ,
ಸಮಾಧಿಗಳ ಇಂಗಿತವು ಇಂತಿದೆ. ●

## ಭೂಕಂಪದ ಮುನ್ಸೂಚನೆ

**ಮಾಸ್ಕೋ: ಡಿಸೆಂಬರ್ 11, 1981 ( ಟಾಸ್ ):**

ಮಧ್ಯ ಏಶ್ಯಾದ ಸೋವಿಯೆತ್ ಗಣರಾಜ್ಯ ತಾಜಿಕಿಸ್ತಾನ್ ಪ್ರತಿವರ್ಷ 6,000
ಭೂಕಂಪಗಳನ್ನು ದಾಖಲುಮಾಡುತ್ತದೆ. ಅದೇ ರೀತಿ ಉಜ್ಬೆಕಿಸ್ತಾನ, ಟರ್ಕ್‌ಮೇ
ನಿಯಾ, ಕಿರ್ಘಿಝಿಯಾ ಮತ್ತು ಕಝುಕಸ್ತಾನಗಳೂ ಭೂಕಂಪನಗಳಿಗೆ ಹೆಸರಾದ
ಗಣರಾಜ್ಯಗಳಾಗಿವೆಯೆಂದು ' ಮಾಸ್ಕೋ ನ್ಯೂಸ್ ' ಬರೆದಿದೆ.

ಕಳೆದ ಹದಿನೈದು ವರ್ಷಗಳಲ್ಲಿ ಸಂಶೋಧಕರು ಭೂ ಅಂತರ್ಗತ ಚಲನೆಗಳ
ಭವಿಷ್ಯ ಸಾಧಿಸಿದ್ದಾರೆ. ಇದಕ್ಕೆ ಬೃಹತ್ ಪ್ರಮಾಣದ ಭೂ ಕಂಪನ ಮಾಹಿತಿಗಳ
ಸಂಗ್ರಹ ಮತ್ತು ಪರಿಷ್ಕರಣ ನಡೆಯಬೇಕಾಗುತ್ತದೆ. ಈ ಉದ್ದೇಶಕ್ಕಾಗಿ ತಾಝಿಕ್
ಗಣರಾಜ್ಯದ ರಾಜಧಾನಿಯಾದ ದುಷಾಂಬೆಯಲ್ಲಿ ವಿವಿಧ ಗಣರಾಜ್ಯಗಳ ತಜ್ಞರು
ಪ್ರಾದೇಶಿಕ ಭೂಕಂಪ ಕೇಂದ್ರವೊಂದನ್ನು ಸ್ಥಾಪಿಸಿದ್ದಾರೆ.

ಕುತೂಹಲಕಾರಿ ನಕಾಶೆಗಳು, ವಿಧಾನಗಳು ಮತ್ತು ಸಂಶೋಧನ ಕಾರ್ಯಕ್ರಮ
ಗಳ ನೆರವಿನಿಂದ ಭೂಕಂಪಗಳನ್ನು ಮುಂದಾಗಿ ಹೇಳುವ ವಿಧಾನವನ್ನು ರೂಪಿಸಲಾ
ಗುತ್ತಿದೆ.

ಇನ್ನು ಕೇಲವೇ ಸಮಯದಲ್ಲಿ ಭೂಕಂಪ ನಡೆಯುವ ಕಾಲ ಮತು ಸ್ಥಳವನ್ನು
ಕರಾರುವಾಕ್ಕಾಗಿ ಭವಿಷ್ಯ ನುಡಿಯಲು ಸಾಧ್ಯ. ಇದೀಗ ಈ ಸಮಸ್ಯೆ ತಾಂತ್ರಿಕ
ಪರಿಹಾರ ಕರಡುಕೊಳ್ಳುವ ದಿಸೆಯಲ್ಲಿ ಹಾದುಹೋಗುತ್ತಿದೆ. ಅದು ಪೂರ್ಣಗೊಂಡಾಗ
ಮಧ್ಯ ಏಶ್ಯಾದಲ್ಲಿ ಭೂಕಂಪ ಸಂಭವಿಸುವುದನ್ನು ಹದಿನೈದು ವರ್ಷಗಳಷ್ಟು ಮುಂಚಿ
ತವಾಗಿಯೆ ಭವಿಷ್ಯ ನುಡಿಯಬಹುದಾಗುತ್ತದೆ. ●

# ಸಿಗರೇಟ್ ಹಾನಿಕರ ಹೇಗೆ ?

—ಪ. ರಾಮಕೃಷ್ಣ ಶಾಸ್ತ್ರಿ

ಜಗತ್ತಿನಾದ್ಯಂತ ಅತ್ಯಧಿಕ ಜನಪ್ರಿಯವಾಗಿರುವ ಚಟವೆಂದರೆ ಧೂಮಪಾನದ್ದು. ಕಳೆದ ಒಂದು ದಶಕದಲ್ಲಿ ಎಂಟು ರಾಷ್ಟ್ರಗಳಲ್ಲಿ ಎಂಬತ್ತು ಹೆಸರಾಂತ ವೈದ್ಯಕೀಯ ಕೇಂದ್ರಗಳಲ್ಲದೆ ಮತ್ತಿತರರ ಸಂಶೋಧನ ಇಲಾಖೆಗಳು ನಡೆಸಿದ ವೈದ್ಯಕೀಯ ಸಂಶೋಧನೆಗಳ-ಫಲವಾಗಿ ಅದು ಆರೋಗ್ಯಕ್ಕೆ ತೀವ್ರ ಹಾನಿಕರ ಎಂಬುದು ಖಚಿತವಾಗಿದೆ.

ತಂಬಾಕಿನಲ್ಲಿ ನಿಕೋಟಿನ್ ಎಂಬ ವಿಷವಿದೆ. ನೀವು ಸೇದಿದ ಒಂದು ಸಿಗರೇಟಿನಿಂದ ಉತ್ಪನ್ನವಾಗುವ ನಿಕೋಟಿನ್ ಒಂದರಿಂದ ಎರಡು ಮಿಲಿಗ್ರಾಂ. ಸಿಗರೇಟಿನ ದಮ್ಮನ್ನು ಎರಡರಿಂದ ಐದು ಸೆಕೆಂಡ್ ಕಾಲ ಒಳಗೆಳೆದುಕೊಂಡರೆ ಸಿಗರೇಟಿನ ಹೊಗೆಯಲ್ಲಿ ಇರುವ ಡೈಬೆಂಜೋ ಆಕ್ರಿಡೀನ್. ಬೆಂಜೊಪಿರೀನ್, ಡೈಬೆಂಜೋ ಕಾರ್ಪೊಜೋಸ್, ಡೈಬೆಂಜೋ ಆ್ಯಂತ್ರಸೀನ್ ಎಂಬಿತ್ಯಾದಿ ಆರು ಹಾನಿಕಾರಕ ವಸ್ತುಗಳು ಶೇಕಡ ಎಂಬತ್ತರಷ್ಟು ಶ್ವಾಸನಾಳದಲ್ಲಿ ಉಳಿಯುತ್ತವೆ. ಅದರಿಂದ ಶ್ವಾಸಕೋಶದ ಕ್ಯಾನ್ಸರು ಆರಂಭವಾಗುವುದು ಖಂಡಿತ. ಸತತ ಇಪ್ಪತ್ತು ವರ್ಷ ಸಿಗರೇಟಿನ ಅಭ್ಯಾಸ ಮಾಡಿದರೆ ಈ ರೋಗ ಬರುವುದು. ಸಿಗರೇಟಿನ ಹೋಗೆಯಿಂದ ಈ ವಸ್ತುಗಳನ್ನು ಬೇರ್ಪಡಿಸಿ ಕೆಲವು ಪ್ರಾಣಿಗಳ ಮೈಮೇಲೆ ಪ್ರಯೋಗಿಸಿದಾಗ ಅವು ಕೂಡಲೇ ಕ್ಯಾನ್ಸರಿಗೆ ತುತ್ತಾದವು. ಶ್ವಾಸಕೋಶದ ಕ್ಯಾನ್ಸರ್ ಉಳದವರಿಗಿಂತ (ಶೇಕಡ ಹದಿನೈದು) ಸಿಗರೇಟು ಸೇದುವವರಿಗೆ (ಅದರಲ್ಲೂ ಸ್ತ್ರೀಯರಿಗಿಂತ ಪುರುಷರಿಗೇ) ಅಧಿಕ. ಈ ವ್ಯಾಧಿಯಿಂದ ಅಮೇರಿಕೆಯೊಂದರಲ್ಲೇ ಪ್ರತಿ ವರುಷ ಸಾಯುವವರ ಸಂಖ್ಯೆ ೪೨೭೫೦! ಪಾಶ್ಚಾತ್ಯ ದೇಶಗಳಲ್ಲಿ ಮಹಿಳೆಯರೂ ಸಿಗರೇಟು ಸೇದುತ್ತಿರುವ ಕಾರಣ ಹುಟ್ಟುವಾಗ ೭.೩ ಪೌಂಡು ಇರಬೇಕಾದ ಅವರ ಮಕ್ಕಳ ತೂಕ ಐದು ಪೌಂಡಿಗಿಳಿದಿದೆ. ಬಸುರಿ ಸಿಗರೇಟು ಸೇದುವಾಗ ಗರ್ಭಸ್ಥ ಶಿಶುವಿನ ಎದೆ ಬಡಿತ ಹೆಚ್ಚಾಗುತ್ತದೆಂದೂ ಗೊತ್ತಾಗಿದೆ.

ಇಂಗ್ಲೆಂಡಿನಲ್ಲಿ ಸ್ವಾಸಕಾಂಗದ ಕ್ಯಾನ್ಸರ್‌ನಲ್ಲಿ ಬಳಲುತ್ತಿದ್ದ ಪ್ರತಿ ೪೧ ಜನರಲ್ಲಿ ೪೦ ಜನರೂ ದಿನದಲ್ಲಿ ಇಪ್ಪತ್ತಕಿಂತ ಹೆಚ್ಚು ಸಿಗರೇಟು ಸೇದುತ್ತಿದ್ದವರು. ಆಗೊಮ್ಮೆ ಈಗೊಮ್ಮೆ ಸಿಗರೇಟು ಸೇದುವವರಿಗೂ ಈ ರೋಗದ ವಿಕಾರಗಳುಂಟಾಗಲು ಸಾಧ್ಯ. ಸಿಗರೇಟು ಸೇದದ ಕ್ಯಾನ್ಸರು ರೋಗಿಗಳ ಶ್ವಾಸಾಂಗದಲ್ಲಿ ಶೇ. ೩.೮ ರಷ್ಟು ರೋಗಾಣುಗಳಿದ್ದರೆ ಅಪರೂಪಕ್ಕೊಮ್ಮೆ ಸೇದುವವರಲ್ಲಿ ಶೇ. ೧೦.೯ ರಷ್ಟಿದ್ದುವು! ಹತ್ತರಿಂದ ಇಪತ್ತರಷ್ಟು ಸೇದುವವರಲ್ಲಿ ಶೇ. ೯೯.೯ ರಷ್ಟಿದ್ದುವು. ದಿನಕ್ಕೆ ೫ ಸೇದುತ್ತಿದ್ದವರಲ್ಲಿ ಶೇ. ೯೭ ರಷ್ಟು ರೋಗಲಕ್ಷಣಗಳು ಕಾಣಿಸಿಕೊಂಡವು. ಸಿಗರೇಟಿನ ದಾಸಾನುದಾಸರ ಕೈ ಬೆರಳುಗಳೂ ಮಿತಿಗಿಂತ ಕಮ್ಮಿ ತಣ್ಣಗಿರುತ್ತವೆಯಂತೆ.

ಮಾನವ ಎದುರಿಸುತ್ತಿರುವ ಅಪಾಯಗಳಲ್ಲೇ ಅತ್ಯಂತ ತೀವ್ರವಾದುದು ಧೂಮಪಾನವೆಂದು ಜರ್ಮನಿಯ ನರವಿಜ್ಞಾನಿ ಡಾ॥ ಕ್ಲಾಸ್‌ಕ್ಲಾಸೆನ್‌ರ ಹೇಳಿಕೆ. ಶರೀರದಲ್ಲಿರುವ ಸಕ್ಕರೆಯಂತಹ ರಾಸಾಯನಿಕ ವಸ್ತುಗಳನ್ನು ಧೂಮಪಾನ ನಾಶಮಾಡುತ್ತದೆಂದೂ ನರಗಳ ಬಿಗಿತವುಂಟುಮಾಡಿ ಮೆದುಳಿಗೆ ಹಾನಿ ತರುತ್ತದೆಂದೂ ಅವರು ಎಚ್ಚರಿಸಿದ್ದಾರೆ. ವಿಪರೀತ ಧೂಮಪಾನ ಮಾಡುವ ಪುರುಷರು ನಿರ್ವೀರ್ಯರಾಗುತ್ತಾರೆ; ಸ್ತ್ರೀಯರು ಬಂಜೆಯರಾಗುತ್ತಾರೆ. ಅಕಾಲ ಪ್ರಸವ. ಶಿಶುಮರಣ ಹೆಚ್ಚಾಗುತ್ತದೆ. ಎಂದು ಅಖಿಲ ಭಾರತೀಯ ವೈದ್ಯಕೀಯ ವಿಜ್ಞಾನ ಸಂಸ್ಥೆ ತಿಳಿಯಪಡಿಸಿದೆ. ಸದಾ ಹೊಗೆ ಬತ್ತಿ ಸೇದುತ್ತಿರುವವನ ವೈವಾಹಿಕ ಜೀವನವೂ ಸುಖಮಯವಾಗಿರುವುದಿಲ್ಲ. ಅಲ್ಲದೆ ಧೂಮಪಾನಿ ಸ್ಥಿರ ಬುದ್ಧಿಯವನಾಗಿರುವುದಿಲ್ಲ.

### ಧೂಮಪಾನ ಬಿಡುವುದು ಹೇಗೆ?

ಅ. ಭಾ. ವೈದ್ಯಕೀಯ ಸಂಸ್ಥೆ ಹೇಳುವುದು ಹೀಗೆ.

i) ಧೂಮಪಾನದ ಎಲ್ಲಾ ವಸ್ತುಗಳನ್ನು ಮೊದಲು ಎಸೆಯಿರಿ.

ii) ನಿಮ್ಮ ಮಿತ್ರರು ಒತ್ತಾಯಿಸಿ ಕೊಡಬಂದಾಗ ಡಾಕ್ಟರರ ಸಲಹೆಯಂತೆ ಅದನ್ನು ಬಿಟ್ಟಿರುವುದಾಗಿ ಹೇಳಿರಿ.

iii) ಈ ಚಟ ಬಿಟ್ಟಾಗ ಕೈಕಡಿತ, ಹಿಂಸೆ ಆಗುವುದು ಸಹಜ ಹಾಗಾದಾಗ ಸೇಬನ್ನು ಕಚ್ಚಿ ತಿನ್ನಿ ಇಲ್ಲವೆ ದ್ರಾಕ್ಷಿಯನ್ನು ಬಾಯಿಗೆ ಹಾಕಿಕೊಳ್ಳಿ ಅಥವಾ ಚೂಯಿಂಗ್‌ಗಮ್ ಅಗಿಯಲಾರಂಭಿಸಿ.

" ಈ ಕೆಟ್ಟ ಚಟವನ್ನು ಹಣಕೊಟ್ಟು ಕೊಂಡು ಅಮೂಲ್ಯವಾದ ಮನುಜ ಶರೀರವನ್ನು ಹಾಳುಮಾಡಿಕೊಳ್ಳಬೇಡಿ ಹುಚ್ಚಪ್ಪಗಳಿರಾ "

ಧೂಮಪಾನ ಮಾಡಿದರೆ ಹೃದಯದ ಬಡಿತ ಮಿನಿಟಿಗೆ ೫ ರಿಂದ ೨೦ ಕ್ಕೆ ಹೆಚ್ಚುತ್ತದೆ. ಅದನ್ನು ಸರಿದೂಗಿಸಲು ಓಜೋದ್ದೀಪಕ ರಸಗ್ರಂಥಿಗಳು ಹೆಚ್ಚು ಕೆಲಸ ಮಾಡಬೇಕಾಗುವುದರಿಂದ ನರಗಳಲ್ಲಿ ರಕ್ತದ ಪ್ರವಾಹ ಕಡಿಮೆಯಾಗಿ ಬೆರಳುಗಳು ತಣ್ಣಗಾಗುತ್ತವೆ. ಚರ್ಮದ ಶಾಖ ಕುಗ್ಗುತ್ತದೆ. ರಕ್ತದ ಓಟ ಶೇ. ೧೦ ರಿಂದ ೨೦ ಕ್ಕೇರುತ್ತಿದೆ. ಹಸಿವು ಕಡಿಮೆಯಾಗುತ್ತದೆ; ರುಚಿ ಮತ್ತು ವಾಸನೆಯ ಶಕ್ತಿ ಬದಲಾಗುತ್ತದೆ. ರಕ್ತಕ್ಕೆ ಪ್ರಾಣವಾಯುವಿನ ಬದಲು ಕಾರ್ಬನ್ ಮೊನೋಕ್ಸಾಯಿಡ್ ಸೇರುತ್ತದೆ. ಮನುಷ್ಯನ ಪ್ರಾಣ ತಕ್ಷಣ ಹೀರಲು ೧೦ ಸಿಗರೇಟಿನಲ್ಲಿರುವ ನಿಕೋ

ಟಿನ್ ಒಮ್ಮೆಲೆ ಸೇವಿಸಿದರೆ ಸಾಕು. ಆದರೆ ಸಿ ಗ ರೇ ಟ್ ಸೇವನೆಯಿಂದ ಹೆಚ್ಚಿನ ನಿಕೋಟಿನ್ ಹೊರಬೀಳುವ ಕಾರಣ ಅದು ತಕ್ಷಣ ಪ್ರಾಣಾಪಹಾರಿ ಅಲ್ಲ.

ಮೂತ್ರಕೋಶದ ಕ್ಯಾನ್ಸರಿಗೆ ಆಲ್ಫಾ ಮತ್ತು ಬೀಟಾ ನೆಫ್ತಿಲ್ ಮೈನ್ ಎಂಬ ದ್ರವಗಳು ಕಾರಣ. ಇವು ಸಿಗರೇಟಿನಲ್ಲಿ ಇವೆಯೆಂದು ಇಲಿಗಳ ಮೇಲೆ ನಡೆಸಿದ ಪ್ರಯೋಗಗಳಿಂದ ವ್ಯಕ್ತಗೊಂಡಿದೆ. ನಿಕೋಟಿನ್ ಜೀವಕೋಶಗಳ ಮೇಲೆ ಬೀರುವ ದುಷ್ಪರಿಣಾಮದಿಂದಾಗಿ ಕಾಲು ಬೆರಳು, ಪಾದ ಕೊಳೆಯುವಂಥ ರೋಗ, ನಾಲಿಗೆ, ತುಟಿ, ಅನ್ನನಾಳಗಳ ಕ್ಯಾನ್ಸರೂ ಬರಬಹುದು. ಹೃದಯವೇದನೆ, ನಿದ್ರಾಹೀನತೆ, ದಮ್ಮು, ಗಂಟಲು ಉರಿ, ಧ್ವನಿನಾಳದ ನೋವು, ಎಂಫಿಸೀಮಾ, ಕ್ಷಯರೋಗ ಇವೆಲ್ಲವೂ ಧೂಮಪಾನದ ಕೊಡುಗೆಗಳು. ಅದಲ್ಲದೆ ಕೆಲವರಿಗೆ ದೃಷ್ಟಿವಕಾಂಧ್ಯವೂ ಬಂದಿದೆ. ಧೂಮಪಾನದಿಂದಾಗಿ ರಕ್ತನಾಳಗಳ ರೋಗಕ್ಕೆ ಬಲಿಯಾದವರಿಗೆ ಕೊನೆಗೆ ಕೈ ಕಾಲುಗಳನ್ನು ಕತ್ತರಿಸಬೇಕಾದುದು ಅನಿವಾರ್ಯವೇ ಆದೀತು. ಕೋರೋನರಿ ಹೃದಯರೋಗ ಹೆಚ್ಚಾಗಿ ಕಂಡು ಬಂದುದು ಧೂಮಪಾನಿಗಳಲ್ಲೇ. ಸಿಗರೇಟಿನ ಚಟ ತೊರೆದರೆ ಹಲವು ವ್ಯಾಧಿಗಳಿಂದ ತಪ್ಪಿಸಿಕೊಳ್ಳಬಹುದು.

ಧೂಮಪಾನದಿಂದಾಗಿ ಅಪಧಮನಿಗಳು ರಕ್ತ ಮತ್ತು ಪೋಷಕಾಂಶಗಳ ಸರಬರಾಜು ನಿಲ್ಲಿಸುತ್ತವೆ. ಹೀಗಾಗಿ ಸ್ವಲ್ಪ ಆಯಾಸವಾದರೂ ತಾಳಲಾಗದ ನೋವುಂಟಾಗುತ್ತದೆ. ದಿನಕ್ಕೆ ಒಂದು ಪ್ಯಾಕು ಸಿಗರೇಟು ಸೇದುವವನ ಜೀವಮಾನದಲ್ಲಿ ೫ ವರ್ಷಗಳು ಕಡಿಮೆಯಾಗುತ್ತವೆಯಂತೆ. ಸಿಗರೇಟು ಪ್ರಿಯರಿಗೆ ಪೈರೋಮ್ಯಾನಿಯಾ ಎಂಬ ಮನೋವ್ಯಾಧಿ ಇರಬೇಕೆಂಬುದೂ ತಜ್ಞರ ತರ್ಕ. ಅಂಥವರಿಗೆ ವಸ್ತುಗಳಿಗೆ ಬೆಂಕಿ ಹಚ್ಚಿ ಸುಡಬೇಕೆಂಬ ಆಕಾಂಕ್ಷೆ ಇರುತ್ತದೆಂದೂ ಇದಕ್ಕೆ ಆಸ್ಪದ ಸಿಗದಾಗ ಈ ರೀತಿಯ ದಹನ ಮಾಡುತ್ತಾರೆಂದೂ ಅವರ ವಾದ. ಹಲವರಿಗೆ 'ಸಂತೋಷಕ್ಕಾಗಿ ಅಂಟಿಕೊಳ್ಳುವ ಈ ದುರಭ್ಯಾಸ ಒಮ್ಮೆ ಹಿಡಿಯಿತೆಂದರೆ ಬಿಡ್ತೇನೆಂದ್ರೂ ಬಿಡದ ಬ್ರಹ್ಮೇತಿ !

ಪುಪ್ಪುಸ ಕ್ಯಾನ್ಸರಿನಿಂದ ಸಾಯುವ ಪ್ರತಿಶತ ರೋಗಿಗಳಲ್ಲಿ ೬೩ ಮಂದಿ ಧೂಮಪಾನಿಗಳಾಗಿದ್ದಾರೆ. ಸಿಗರೇಟಿನ ಹೊಗೆಯಲ್ಲಿ ತಜ್ಞರು ಗುರುತಿಸಿರುವ ಅನಿಲಗಳು ೨೫೦ ಬಗೆಯವು. ಅವುಗಳಲ್ಲಿ ೧೬ ಅನಿಲಗಳು ಕ್ಯಾನ್ಸರನ್ನು ಉತ್ಪಾದಿಸುವವಾದರೆ ಶ್ವಾಸಕೋಶಕ್ಕೆ ಹಾನಿ ತರುವ ಅನಿಲಗಳು ೯ ಇವೆ. ಅದರಿಂದಾಗಿ ಶ್ವಾಸನಾಳಗಳು ಊದಿಕೊಳ್ಳುವ ಬ್ರಾಂಕ್ವಾಟಿಸ್ ಬರುತ್ತದೆ.

ದಿನಕ್ಕೆ ೨೫ ಕ್ಕಿಂತ ಹೆಚ್ಚು ಸಿಗರೇಟು ಸೇದುವವರು ಬ್ರಾಂಕ್ವಾಟಿಸ್‌ನಿಂದ ಸಾಯುವುದು ಸೇದದದರಿಗಿಂತ ೬ ಪಟ್ಟು, ಎಂಫಿಸೀಮಾದಲ್ಲಿ ಮೂರುಪಟ್ಟು ಅಧಿಕ. ಸಿಗರೇಟು ತ್ಯಜಿಸಿದರೆ ಬ್ರಾಂಕ್ವಾಟಿಸ್ ರೋಗಕಾರಕವಾದ ಕಫದ ಉತ್ಪನ್ನ ಮಾಯವಾಗುತ್ತದೆ. ಹೃದಯದ ಧಮನಿಗಳಲ್ಲಿ ರಕ್ತ ಹೆಪ್ಪುಗಟ್ಟಿ ಸಾವು ಬರುವ ಥ್ರಾಂಬಾ



ಸಿಸ್ ರೋಗ ೫೫ ರೊಳಗಿನ ವಯಸ್ಸಿನವರಲ್ಲಿ ಮಿತಿಮೀರಿದ ಧೂಮಪಾನದಿಂದ ಉಂಟಾಗುತ್ತದೆ. ಜಠರದಲ್ಲಿ ವ್ರಣಗಳಿರುವವರಿಗೆ ಧೂಮಪಾನದಿಂದಾಗಿ ಹಸಿವು ಕಮ್ಮಿಯಾಗುತ್ತದೆಂದು ಗೊತ್ತಾಗಿದೆ.

ಬ್ರಿಟನ್ನಿನಲ್ಲಿ ಧೂಮಪಾನ ಆ ರೋ ೀ ಗ್ಯ ಕ್ಕೆ ಹಾನಿಕರವೆಂಬುದು ಗೊತ್ತಾದ ಕೂಡಲೇ ಆ ಚಟವಿದ್ದ ಡಾಕ್ಟರುಗಳೆಲ್ಲ ಅದನ್ನು ಬಿಟ್ಟುಕೊಟ್ಟರು. ಆ ಹಾನಿಗಳ ವಿವರವಿರುದ ಮುದ್ರಿತ ಕರಪತ್ರಗಳನ್ನು ಸಾರ್ವಜನಿಕರಿಗೆ ಹಂ ಚಿ ದ ರು. ಶಾಲಾ ಮಕ್ಕಳಿಗೆ ಧೂಮಪಾನದ ದುಷ್ಫಲಗಳನ್ನು ವಿವರಿಸಿದರು. ಅಮೇರಿಕದ ಕ್ಯಾನ್ಸರು ಸಂಘವು ಸಿಗರೇಟಿನ ಎಲ್ಲಾ ಪ್ಯಾಕುಗಳ ಮೇಲೂ ಒಳಗಿರುವ ಸಿಗರೇಟಿನಲ್ಲಿ ತಾರು ಮತ್ತು ನಿಕೋಟಿನ್ ಎಷ್ಟು ಅಂಶವಿದೆ ಎಂಬುದನ್ನು ಮುದ್ರಿಸಲು ಸೂಚಿಸಿತು. ಸಾರ್ವಜನಿಕ ಸ್ಥಳಗಳಲ್ಲಿ ಸಿಗರೇಟು ಸೇವನೆಯನ್ನೂ ನಿಲ್ಲಿಸಬೇಕೆಂದೂ ಸೂಚಿಸಿದವರಿದ್ದರು. ಭಾರತದಲ್ಲೂ ಸಿಗರೇಟು ಸೇವನೆ ಆರೋಗ್ಯಕ್ಕೆ ಹಾನಿಕರವೆಂದು ಪ್ಯಾಕುಗಳಲ್ಲಿ ಮುದ್ರಿಸಲು ಶಾಸನವುಂಟು.

ಸಿಗರೇಟಿನ ಚಟ ಅಂಟಿಕೊಂಡರೆ ಪ್ರತಿ ಮೂವರಲ್ಲಿ ಒಬ್ಬನಿಗೆ ಮಾತ್ರ ಅದನ್ನು ಬಿಡಲು ಸಾಧ್ಯ. ಇದನ್ನು ಬಲವಂತವಾಗಿ ತಪ್ಪಿಸಿದಾಗ ಅಂಥವರು ಬೇರೆ ಏನಾದರೊಂದು ದುರಭ್ಯಾಸಕ್ಕೆ ತುತ್ತಾಗುವುದು ನಿಶ್ಚಿತ. ಧೂಮಪಾನಿಗಳ ರಕ್ತಸಾರದಲ್ಲಿ ಕೊಲೆಸ್ಟೆರೋಲ್ ಮತ್ತಿತರ ಪ್ರೋಟೀನುಗಳು ಒಂದುಗೂಡಿ ರಕ್ತಕಣಗಳು ಗಂಟುಕಟ್ಟುತ್ತವೆ. ಒಳ್ಳೆಯ ವ್ಯಾಯಾಮ, ಉತ್ತಮ ಆಹಾರ ಸೇವನೆ, ಏಕಾಗ್ರಚಿತ್ತಗಳಿಂದ ಧೂಮಪಾನವನ್ನು ತ್ಯಜಿಸಬಹುದು ಎನ್ನುತ್ತಾರೆ ಸಂಶೋಧಕರು.

ಧೂಮಪಾನ ಹೇಗೆ ಬಿಡುವುದು ? ಅ. ಭಾ. ವೈದ್ಯಕೀಯ ಸಂಸ್ಥೆ ಹೇಳುವುದು ಹೀಗೆ : "ಧೂಮಪಾನದ ಎಲ್ಲಾ ವಸ್ತುಗಳನ್ನೂ ಮೊದಲು ಎಸೆಯಿರಿ. ನಿಮ್ಮ ಮಿತ್ರರು ಒತ್ತಾಯಿಸಿ ಕೊಡಬಂದಾಗ ಡಾಕ್ಟರರ ಸಲಹೆಯಂತೆ ಅದನ್ನು ಬಿಟ್ಟಿರುವುದಾಗಿ ಹೇಳಿರಿ. ಇದನ್ನು ಬಿಟ್ಟಾಗ ನಿಮಗೆ ಕೈಕಡಿತ, ಹಿಂಸೆ ಆಗುವುದು ಸಹಜ. ಹಾಗಾದಾಗ ಸೇಬು ಕಚ್ಚಿ ತಿನ್ನಿ, ದ್ರಾಕ್ಷಿ ಬಾಯಿಗೆ ಹಾಕಿಕೊಳ್ಳಿ, ಇಲ್ಲವೇ ಚೂಯಿಂಗ್ ಗಮ್ ಅಗಿಯಲಾರಂಭಿಸಿ'' ಆದ್ದರಿಂದ ಈ ಕೆಟ್ಟ ಚಟವನ್ನು ಹಣ ಕೊಟ್ಟು ಕೊಂಡುಕೊಂಡು 'ಅಮೂಲ್ಯವಾದ ಮನುಜ ಶರೀರವನ್ನು ಹಾಳುಮಾಡಿಕೊಳ್ಳಬೇಡ ಹುಚ್ಚಪ್ಪಗಳಿರಾ !'

ವಾಹನಗಳಲ್ಲಿ ಕಛೇರಿಗಳಲ್ಲಿ 'ಹೊಗೆಬತ್ತಿ ಸೇದಬಾರದು' ಎಂಬ ಫಲಕಗಳಿದ್ದರೂ ಅನೇಕ ಸುಶಿಕ್ಷಿತರಿಗೆ ಅವುಗಳನ್ನು ಓದಲು ಬರುವುದೇ ಇಲ್ಲ. ಬಹುತೇಕ ದೇಶಗಳಲ್ಲಿ ಸರಕಾರ ಆರೋಗ್ಯಕ್ಕೆ ವ್ಯಯಿಸುವ ಹಣದ ನೂರು ಪಾಲನ್ನು ಸಿಗರೇಟ್ ಕಂಪನಿಗಳು ಜಾಹೀರತಿಗಾಗಿ ಖರ್ಚು ಮಾಡುತ್ತವೆಂದರೆ ಎಂಥ ವಿಪರ್ಯಾಸ ! ●

# ಕಾಶ್ಮೀರ ಶಿವಾದ್ವೈತ ಸಿದ್ಧಾಂತ

—ಬಿ. ಜೆ. ರುದ್ರಪ್ಪ

**ಶಾಕ್ತೋಪಾಯ** :— ನಮ್ಮ ಅನುಭವದಲ್ಲಿರುವ ತಿಳಿವಳಿಕೆಗಳೆಲ್ಲಾ
ಒಂದರಿಂದ ಒಂದು ಬೇರೆಯಾಗಿವೆ. ಬೇರೆಯಾಗಿರುವುದಲ್ಲದೆ ಪ್ರತಿಯೊಂದು ತಿಳಿ
ವಳಿಕೆಯೂ ತನ್ನದೇ ಆದ ವ್ಯಕ್ತಿತ್ವವನ್ನೂ ಪಡೆದಿರುತ್ತದೆ. ಇಂತಹ ಬಗೆ ಬಗೆ
ಯಾಗಿರುವ ಸ್ಥಿತಿಗಳನ್ನೇ ವಿಕಲ್ಪಗಳೆಂದು ಪಾರಿಭಾಷಿಕವಾಗಿ ಕರೆಯುತ್ತಾರೆ.
"ವಿವಿಧಃ ಕಲ್ಪಃ ವಿಕಲ್ಪಃ" ಈ ವಿಕಲ್ಪಗಳು ಲೆಕ್ಕವಿಲ್ಲದಷ್ಟು ಹುಟ್ಟಿ ನಾಶವಾಗುತ್ತಿರು
ತ್ತವೆ. ಭೂಮಿಯು ಮೊದಲು ಶಿವತತ್ವದವರೆಗೂ ಇರುವ ತತ್ವಗಳ ತಿಳಿವಳಿಕೆಗೂ
ವಿಕಲ್ಪಗಳೇ ಆಗಿವೆ. ಭೇದ ಜ್ಞಾನವಿಲ್ಲದೆ ವಿಕಲ್ಪವಿಲ್ಲ. ಈ ವಿಕಲ್ಪಗಳ ಮಹಿಮೆ
ಯಿಂದಲೇ ನಾನು, ನನ್ನದೂ, ನಾನು ಬೇರೆಯೆಂಬ ಭಾವನೆಗಳು ನಿಂತಿರುತ್ತವೆ.
ನಮ್ಮ ಭಾವನಾ ಪ್ರಪಂಚದಲ್ಲಿ ಯಾವ ಯೋಚನೆಗಳೂ ಇಲ್ಲದಿದ್ದರೆ ನಿರ್ವಿಕಲ್ಪ ಸ್ಥಿತಿ
ಯೆನ್ನುತ್ತೇವೆ. ಶಾಸ್ತ್ರಜ್ಞರು ಕಾಲ, ದೇಶ, ಆಕಾರ ಈ ಮೂರು ಅಂಶಗಳಿಗೆ ಒಳ
ಪಟ್ಟಿರುವುದೆಲ್ಲಾ ವಿಕಲ್ಪಗಳೆಂದೂ ಅದಿಲ್ಲದ ಸ್ಥಿತಿಯು ನಿರ್ವಿಕಲ್ಪವೆಂದು ಹೇಳುತ್ತಾರೆ.
ಈ ವಿಕಲ್ಪ ಪ್ರವಾಹದಿಂದಲೇ ಶಕ್ತಿ ಸಂಕೋಚವಾಗಿ ಬದ್ಧಾವಸ್ಥೆಯುಂಟಾಗಿದೆ. ಈ
ಅವಸ್ಥೆಯಲ್ಲಿ ವಿಕಲ್ಪ ಪ್ರಭಾವವು ರಾಗ ದ್ವೇಷಗಳಿಗೂ ಸುಖ ದುಃಖಗಳಿಗೂ ಕಾರಣ
ವಾಗಿದೆ. ಎಷ್ಟೇ ಅವಾಂತರಗಳಿಗೆ ಕಾರಣಗಳಾಗಿದ್ದರೂ ಇವುಗಳಿಗೆ ಒಂದು ಅತಿಶಯ
ವಾದ ಸಾಮರ್ಥ್ಯವಿದೆ. ಲೆಕ್ಕ ಮಾಡಿದ ಪದಾರ್ಥಗಳ ಹಾಗೆ ಇವು ನಿಯಮಿತವಾದ
ಸಂಖ್ಯೆಯಲ್ಲೇ ಇರುವುದಿಲ್ಲ ಒಂದು ವಿಕಲ್ಪದಿಂದ ಇನ್ನೊಂದು ಸಮಾನವಾದ ವಿಕ
ಲ್ಪವು ಹುಟ್ಟುತ್ತದೆ. ಅನೇಕ ವೇಳೆ ಒಂದೇ ವಿಕಲ್ಪದಿಂದ ಅನೇಕ ವಿಕಲ್ಪಗಳುಂಟಾಗು
ತ್ತವೆ. ಅನೇಕ ವಿಕಲ್ಪಗಳಿಂದ ಒಂದು ವಿಕಲ್ಪ ಹುಟ್ಟುವುದೂ ಉಂಟು. ಈ ವಿಕಲ್ಪ
ಸಂತಾನವು ವಿಲಕ್ಷಣವಾದ ಸಂತತಿಯಾಗಿದೆ. ಇದರ ಬೆಳವಣಿಗೆ ಇದ್ದಾಗೆ ಇದರ
ನಾಶವೂ ಆಶ್ಚರ್ಯಕರವಾಗಿದೆ. ಒಂದು ವಿಕಲ್ಪವು ಅದಕ್ಕೆ ವಿರುದ್ಧವಾದ ವಿಕಲ್ಪದಿಂದ
ನಾಶವಾಗುತ್ತದೆ. ಅಥವಾ ತನ್ನ ತೀವ್ರತೆಯನ್ನು ಕಳೆದುಕೊಳ್ಳುತ್ತದೆ. ಒಂದು
ವಿಕಲ್ಪದಿಂದ ಇನ್ನೊಂದು ವಿಕಲ್ಪವು ಸಂಸ್ಕರಿಸಲ್ಪಟ್ಟು ರೂಪಾಂತರಗಳನ್ನು ಪಡೆಯುವು
ದೂ ಉಂಟು.

ವಿಕಲ್ಪಗಳನ್ನು ನಾವು ತಿಳಿವಳಿಕೆಗೋಸ್ಕರ ಅಸ್ಫುಟವಾಗಿರುವುದು, ಸ್ಫುಟವಾಗ
ದಿರುವುದು, ಸ್ಫುಟವಾಗಲಿಕ್ಕೆ ಪ್ರಾರಂಭವಾಗಿರುವುದು, ಸ್ಫುಟವಾಗಿರುವುದು, ಎಂದು



ನಾಲ್ಕು ಬಗೆಯಾಗಿ ವಿಂಗಡಿಸಬಹುದು. ಇವು ಮೊದಲನೆಯ ಅವಸ್ಥೆಯನ್ನು ಬಿಟ್ಟು ಮಿಕ್ಕ ಮೂರು ಅಂತಗಳಲ್ಲಿಯೂ ಸುಖ ದುಃಖವನ್ನುಂಟು ಮಾಡುತ್ತವೆ.

ಸಾಮಾನ್ಯರಾದವರು ಯೋಗ್ಯರಾದವರ ಸಹವಾಸದಲ್ಲಿ ಹತ್ತಾರು ವರ್ಷಗಳಿದ್ದು ಇವರು ಯೋಗ್ಯರಾಗುವುದನ್ನು ನಾವು ಕಂಡಿದ್ದೇವೆ. ಅದೇ ನೀಚರ ಸಹವಾಸದಿಂದ ಕೆಡುವುದನ್ನು ನೋಡಬಹುದು. ಹೊರಗಿನ ಪ್ರಪಂಚದಲ್ಲಿ ಹೇಗೆ ವಿಕಲ್ಪಗಳು ಸಂಸ್ಕರಿಸಲ್ಪಡುತ್ತದೆಯೋ ಅದಕ್ಕಿಂತಲೂ ಸೂಕ್ಷ್ಮ ರೀತಿಯಲ್ಲಿ ಆಂತರೀಯತೆಯಲ್ಲಿಯೂ ವಿಕಲ್ಪ ಸ್ವರೂಪಗಳು ಬದಲಾವಣೆಯನ್ನು ಪಡೆಯುತ್ತವೆ.

ವಿಕಲ್ಪ ಪ್ರವಾಹವು ಆಶ್ಚರ್ಯಕರವಾಗಿ ಎಡಬಿಡದೆ ಆರಿಯುತ್ತಿದ್ದರೂ ಮಧ್ಯೆ ಮಧ್ಯೆ ಮಿಂಚಿನಂತೆ ವಿಕಲ್ಪಗಳಿಲ್ಲದ ಚಿತ್‌ಸ್ಪರ್ಶವೇರ್ಪಡುತ್ತಿರುತ್ತದೆ.

ಚತುಂಷ್ಪರ್ವೇವ ವಿಕಲ್ಪೇಷುಯಃ ಸಂಸ್ಕಾರಃ ಕ್ರಮಾದಸೌ ।
ಅಸ್ಫುಟಃ ಸ್ಫುಟದಾಭಾವೀ ಪ್ರಸ್ಫುಟನ್ ಸ್ಫುಟಲಾತ್ಮಕಃ ।

ತಂತ್ರಾಲೋಕ–ಆನ್ಹಿಕ–ಶ್ಲೋಕ–೪

"ಸಾಜದೃಶ್ಯಾ ರುದದ್ದೇಶೆ ಕಾರ್ಯ ಸ್ಮರಣ ಕಾಲತಃ ।
ಪ್ರಹರ್ಷಾ ವೇದ ಸಮುಯೆ ದರ ಸಂದರ್ಶನಕ್ಷಣೆ ॥
ಅನಾಲೋಚನತೋದೃಷ್ಟೆ ವಿಸರ್ಗ ಪ್ರಸರಾಸ್ಪದೆ ।
ವಿಸರ್ಗೋಕ್ತಿ ಪ್ರಸಂಗೇ ಚ ವಾಚನೆ ಭಾವನೆ ತಥಾ ॥
ಏತೇಷ್ವೇವ ಪ್ರಸಂಗೇಷು ಸರ್ವಶಕ್ತಿ ವಿಲೋಲತಾ ।

—ಶಿವದೃಷ್ಟಿ.

ಓದುವುದು, ಓಡುವುದು, ಭಯ, ಸಂತೋಷ, ಆಶ್ಚರ್ಯ, ವಿಸರ್ಗೋಚ್ಚಾರಣೆ ಮೊದಲಾದ ಘಟನೆಗಳಲ್ಲಿ ಹೀಗೆ ಎಂದು ಹೇಳಲಿಕ್ಕಾಗದಿರುವ ಕ್ಷಣಕಾಲ ಮಾತ್ರ ಅನುಭವಕ್ಕೆ ಬರುವ ನಿಸ್ತರಂಗ ಸ್ಥಿತಿಯೇರ್ಪಡುತ್ತವೆ. ಈ ನಿಸ್ತರಂಗ ಸ್ಥಿತಿ ಧೃಡ ಭೂಮಿಯಾಗುವುದಕ್ಕೆ ಈ ಉಪಾಯಗಳು ಹೊರಟಿವೆ. ಶಿವನ ಬದಲು ಮೊದಲು ಭೂಮಿಯವರೆಗೂ ಇರುವ ತತ್ವಸ್ವರೂಪ ಜ್ಞಾನವು ವಿಕಲ್ಪಗಳೆಂದು ಹೇಳಿದೆವು. ನಮ್ಮ ವ್ಯವಹಾರ ಸೌಕರ್ಯಕ್ಕಾಗಿ ವಿಕಲ್ಪಗಳನ್ನು ಮೂರು ಬಗೆಯಾಗಿ ವಿಂಗಡಿಸಬಹುದು. ಹೊರಗಿನ ಪ್ರಪಂಚದಲ್ಲಿ ನಮ್ಮ ಜೀವನ ವ್ಯವಹಾರವನ್ನು ಸಾಗಿಸುವುದಕ್ಕೆ ಆಶ್ರಯವಾಗಿರುವ ವಿಕಲ್ಪಗಳ ಗುಂಪೊಂದು ಸ್ವಸ್ವರೂಪ ವಿಕಾಸವನ್ನು ಪಡೆಯುವುದಕ್ಕೋಸ್ಕರ ನಾವು ತಿಳಿಯುವ ಪರಾ, ಪರಾಪರಾ, ಅಪರ ಎಂಬ ಮೂರು ಬಗೆಯಾದ ತತ್ವಗಳ ವಿಮರ್ಶನಾ ರೂಪವಾದ ವಿಕಲ್ಪಗಳ ಗುಂಪೊಂದು ವಿಕಲ್ಪಭೂಯಿಷ್ಠವಾದ

ವಿಕಲ್ಪ ಸಂತತಿಯನ್ನು ಕ್ರಮಕ್ರಮವಾಗಿ ತೊಡೆದು ಹಾಕಿ ನಿರ್ವಿಕಲ್ಪ ಭೂಮಿಯನ್ನು ಪಡೆಯುವುದಕ್ಕೆ ನಾವು ಉಪಯೋಗಿಸುವ ವಿಕಲ್ಪಗಳ ಗುಂಪೊಂದು ಅಂದರೆ ಶಿವನಿಗಿಂತ ಬೇರೆ ಯಾವ ವಿಕಲ್ಪವಿಲ್ಲದಿದ್ದರೂ ಅಖ್ಯಾತಿಯ ಬಲದಿಂದ ರೂಪುಗೊಂಡಿರುವ ಭಿನ್ನವೇದ್ಯ ಪ್ರತಾತ್ಮಕವಾಗಿರುವ ಈ ವಿಶ್ವದ ಪದಾರ್ಥ ವಿಕಲ್ಪಗಳನ್ನು ತೊಡೆದುಹಾಕಬೇಕು. ಹಾಗೆಯೇ ಅಖ್ಯಾತಿಯಿಂದ ಕಲುಷಿತವಾಗದ ಸ್ವಯಂ ಪ್ರಕಾಶವಾದ ಸ್ವಸ್ವರೂಪ ವಿಕಾಸಾತ್ಮಕವಾದ ಸ್ಥಿತಿಯನ್ನು ಪಡೆಯಲಿಕ್ಕೋಸ್ಕರ ಮಾಡುವ ಅನುಸಂಧಾನವೇ ನಿರ್ವಿಕಲ್ಪಭೂಮಿ. ದ್ವೈತ ಭಾವನೆಯಿಂದಿರುವ ವಿಕಲ್ಪ ಭೂಮಿಗಳನ್ನು ತೊಡೆದುಹಾಕುವುದಕ್ಕೆ ನಾವು ಉಪಯೋಗಿಸುವ ವಿಕಲ್ಪವು ವಿಕಲ್ಪಗಳನ್ನು ತೊಡೆದು ಹಾಕಿ ತಾನು ಮಾಯವಾಗುತ್ತದೆ. ಚಿತ್ಸ್ವರೂಪದಲ್ಲಿ ಯಾವ ಅಂಶವನ್ನು ತೊಡೆದು ಹಾಕುವ ಹಾಗಿಲ್ಲ ಹೊಸ ಅಂಶವನ್ನು ಸೇರಿಸುವ ಹಾಗಿಲ್ಲ. ಅದರ ಅನುಭವವು ಸ್ಪಷ್ಟವಾಗುವುದೊಂದೇ ಗುರಿ.

ಈ ವಿಕಲ್ಪಗಳ ಒಯ್ದಾಟದಿಂದ ತಪ್ಪಿಸಿಕೊಳ್ಳುವುದಕ್ಕೆ ಮಾಡುವ ಪ್ರಯತ್ನಗಳು ವಿಕಲ್ಪ ರೂಪಗಳಾಗಿಯೇ ಇದ್ದರೂ ಅವು ಶುದ್ಧಾವಿದ್ಯಾ ವಿಕಲ್ಪಗಳು. ಈ ವಿಧವಾದ ವಿಮರ್ಶೆಯು ಸಾಧಕನಿಗೆ ಹುಟ್ಟಬೇಕಾದರೆ ಸತ್ತರ್ಕ, ಸದಾಗಮ ಸದ್ಗುರೋಪದೇಶ ಇವುಗಳು ಬೇಕು ಸತ್ತರ್ಕವೆನ್ನುವುದು ಇವನಿಗಿರುವ ತಿಳವಳಿಕೆಯಲ್ಲಿ ಸ್ವಸ್ವರೂಪ ವಿಕಾಸವನ್ನುಂಟುಮಾಡುವ ಕ್ರಮವನ್ನು ನಿರ್ಣಯಿಸುತ್ತದೆ. ಭಾರಿಭಾರಿಗೂ ಜ್ಯೋತಿಸ್ವರೂಪವನ್ನು ವಿಮರ್ಶೆ ಮಾಡುವವರಿಗೆ ಸ್ಪಷ್ಟವಾದ ಸಾಕ್ಷಾತ್ಕಾರವೇರ್ಪಡುತ್ತದೆ. ಅದರ ಪ್ರಭಾವದಿಂದ ವಿಶ್ವಾತ್ಮಕನು ವಿಶ್ವಾತೀತನು ತಾನೇ ಎಂಬ ಪೂರ್ಣಾಭಾವ ಉಂಟಾಗುತ್ತದೆ.

ಬದ್ಧ ದೆಶೆಯಲ್ಲಿ ವಿಕಲ್ಪಗಳಿಗಾಶ್ರಯವಾಗಿರುವುದು ಚಿತ್ತು. ಚಿತ್ತದಿಂದುಂಟಾಗುವ ವಿಕಲ್ಪಗಳಿಂದ ಜೀವನ ಯಾತ್ರೆಯು ನಡೆಯುತ್ತಿರುವುದು ಎಲ್ಲರ ಅನುಭವದಲ್ಲಿಯೂ ಇದೆ. ಈ ವಿಕಲ್ಪಗಳನ್ನೇ

ವಿಕಲ್ಪಃ ಸಂಸ್ಕೃತಃ ಸೂತೆ ವಿಕಲ್ಪಂ ಸ್ವಾತ್ಮ ಸಂಸ್ಕೃತಂ ।
ಸ್ವತುಲ್ಯಂ ಸೋಽಪ್ಯನಂ ಸೋಽಪ್ಯನಂ ಸದೃಶಾತ್ಮಕಂ ॥

ತಂತ್ರಾಲೋಕ–೪ ನೇ ಆಹ್ನಿಕ–ಶ್ಲೋಕ–೩

ತತಃ ಸ್ಫುಟ ತರೋ ಯಾವದಂತೇ ಸ್ಫುಟತರೋ ಭವೇತ್ ।
ಅಸ್ಫುಟಾದಾ ವಿಕಲ್ಪೇಚ ಭೇದೋಽಪ್ಯಸ್ತ್ಯಂತರಾಳಿಕಃ ॥
ತತಸ್ಫುಟತೋದಾರ ತಾದ್ರೂಪ್ಯ ಪರಿಬೃಂಹಿತಾ ।
ಸಂವಿದ ಭ್ಯೇತಿ ವಿಮಲಾಮ ವಿಕಲ್ಪ ಸ್ವರೂಪ ತಾಂ ॥

ತಂತ್ರಾಲೋಕ–೪ ನೇ ಆಹ್ನಿಕ–ಶ್ಲೋಕ–೫-೬



ಅತಚ್ಛ ಭೈರವೀಯಂ ಯತ್ ತೇಜ: ಸಂವಿತ್ಸ್ವಭಾವಕಂ ।
ಭೂಯೋ ಭೂಯೋ ವಿಮೃಶತಾಂ ಜಾಯತೆ ತಸ್ಫ ಟಾತ್ಮತಾ ॥

ತಂತ್ರಾಲೋಕ-ಆಹ್ನಿಕ ೪- ಶ್ಲೋಕ-೭

ಪ್ರತ್ಯಾಹಾರ ಧ್ಯಾನ ಧಾರಣ ಮೊದಲಾದ ಸಾಧನೆಗಳಿಂದ ಹದ ಗೊಳಿಸಬೇಕು. ಹಾಗೆಯೇ ಸ್ವಸ್ವರೂಪಾನುಸಂಧಾನದಿಂದ ಮರಳಿ ಉಂಟಾಗುವ ವಿಕಲ್ಪಗಳಿಗೆ ಅಧಿಕಾರವನ್ನು ಕಡಿಮೆ ಮಾಡಬೇಕು. ಒಂದು ಮುಖದಲ್ಲಿ ವಿಕಲ್ಪಗಳನ್ನು ಸಂಸ್ಕರಿಸುವುದು ಇನ್ನೊಂದು ಮುಖದಲ್ಲಿ ನಿರ್ವಿಕಲ್ಪ ಭೂಮಿಯಲ್ಲಿ ಸ್ಥೈರ್ಯವನ್ನು ಸಂಪಾದಿಸುವುದು ಈ ಎರಡಂಶಗಳು ಈ ಉಪಾಯದಲ್ಲಡಗಿವೆ. ವಿಕಲ್ಪಗಳನ್ನು ಸಂಸ್ಕರಿಸುವುದಕ್ಕೆ ನಾವು ಉಪಯೋಗಿಸುವ ಸಾಧನೆಗಳು ಭೇದರೂಪವಾಗಿವೆ. ನಿರ್ವಿಕಲ್ಪ ಭೂಮಿಯಲ್ಲಿ ನಾವು ಸ್ಥೈರ್ಯವನ್ನು ಸಂಪಾದಿಸುವ ಸಾಧನೆ ಅಭೇದ ದೃಷ್ಟಿ. ಈ ಎರಡಂಶಗಳು ಕೂಡಿರುವುದರಿಂದ ಇದಕ್ಕೆ ಭೇದಾಭೇದೋಪಾಯವೆಂದು ಹೆಸರು. ಇದನ್ನೇ ಜ್ಞಾನೋಪಾಯವೆಂದು ಶಾಕ್ತೋಪಾಯವೆಂದೂ ಹೇಳುವುದು. ಈ ಉಪಾಯದಿಂದ ಸಾಕ್ಷಾತ್ಕಾರವನ್ನು ಪಡೆದಿರುವವನು ಜಾಗ್ರದವಸ್ಥೆಯಲ್ಲಿಯೂ ಚಿದ್ರಸಘನರೂಪವಾದ ಪರಮಾರ್ಥಾನಂದವನ್ನು ಅನುಭವಿಸುತ್ತಿರುತ್ತಾನೆ.

ಉಚ್ಚಾರ ರಹಿತಂ ವಸ್ತು, ಚೈತಸ್ಸೈವ ವಿ ಚಿಂತಯನ್ ।
ಯಂ ಸಮಾ ವೇಶಮಾಪ್ನೋತಿ ಸಾಕ್ತ ಸ್ಸೋಽತ್ರಾಭಿಧೀಯತೇ॥

ಶಿವಸೂತ್ರ ವಿಮರ್ಶಿನಿ.

ನಮ್ಮ ಭಾಷೆಯಿಂದ ಉಚ್ಚರಿಸಲಾಗದಿರುವ ಪರಮಾರ್ಥ ತತ್ವವನ್ನು ಮನಸ್ಸಿನಿಂದಲೇ ಧ್ಯಾನ್ಯ ಮಾಡುತ್ತಾ ಸಾಧಕನು ಯಾವ ಸಮಾವೇಶವನ್ನು ಪಡೆಯುತ್ತಾನೋ ಅದಕ್ಕೆ ಶಾಕ್ತೋಪಾಯವೆಂದು ಹೆಸರು. ●

## ಸಂಪತ್ತಿನಲ್ಲೆಲ್ಲಾ ವಿದ್ಯಾ ಸಂಪತ್ತೇ ಬಹಳ ಶ್ರೇಷ್ಠವಾದುದು

ಅದನ್ನು ಕದಿಯಲು ಸಾಧ್ಯವಿಲ್ಲ. ಸಹೋದರರು ತಂದೆಯ ಆಸ್ತಿಯಂತೆ ಪಾಲು ಮಾಡಿಕೊಳ್ಳಲು ಸಾಧ್ಯವಿಲ್ಲ. ಖರ್ಚು ಮಾಡಿದರೆ ಪ್ರತಿದಿನವೂ ಅಭಿವೃದ್ಧಿಯನ್ನು ಹೊಂದುತ್ತದೆ. ಅದು ಬಹಳ ಬೆಲೆಯುಳ್ಳದ್ದು. ಅದಕ್ಕೆ ಎಂದೂ ನಾಶವಿಲ್ಲ.

ವಿದ್ಯೆಯು ತಾಯಿಯಂತೆ ರಕ್ಷಿಸುತ್ತದೆ. ತಂದೆಯಂತೆ ಹಿತಕರ ಕಾರ್ಯದಲ್ಲಿ ಪ್ರೇರೇಪಿಸುತ್ತದೆ. ವ್ಯಥೆಯನ್ನು ಹೋಗಲಾಡಿಸಿ ಪ್ರಿಯಳಂತೆ ಸಂತೋಷಪಡಿಸುತ್ತದೆ. ಹೀಗೆ ವಿದ್ಯೆ ಕಲ್ಪವೃಕ್ಷದಂತೆ ಯಾವುದನ್ನ ಸಾಧಿಸಿಕೊಡುವುದಿಲ್ಲ ?

ಬಾಲಕನಿಗೆ ಇಂತಹ ವಿದ್ಯೆಯನ್ನು ಕಲಿಸದ ತಾಯಿಯೇ ಶತ್ರು, ತಂದೆಯೇ ವೈರಿ

# ಹೊಸ ಬಸ್ ಕಂಡಕ್ಟರ್‌ನ ಅನುಭವ

—ಕ್ಯಾಪ್ಟನ್. ಎ. ಎನ್. ರಾವ್,

ಇತ್ತೀಚೆಗೆ ಶಾಲಾ ಕಾಲೇಜುಗಳು ನಡೆಯುತ್ತಿರುವ ಪರಿಸ್ಥಿತಿಯಲ್ಲಿ, ಪರೀಕ್ಷೆಗಳು, ಉಪಾಧ್ಯಾಯರಿಗೆ ದೊರಕುವ ರಜಾದಿನಗಳು, ಬಹು ಅನಿಶ್ಚಿತ ಪರಿಸ್ಥಿತಿಯಲ್ಲಿರುತ್ತವೆ. ಹಿಂದಿನಂತೆ ವಾರ್ಷಿಕ ಪರೀಕ್ಷೆಗಳು ಮುಗಿಯುವ ದಿನ, ಅಧ್ಯಾಪಕರು ರಜಾ ದಿನಗಳಲ್ಲಿ ಮನೋರಂಜನೆಗಾಗಿ ಪ್ರವಾಸಕ್ಕೆ ಗೊತ್ತುಮಾಡಬಹುದಾದ ದಿನಗಳು, ಪ್ರವಾಸಕ್ಕೆ ಹೊರಡುವ ತಾರೀಕು ಬಸ್ಸು ಅಥವಾ ರೈಲು ಮೊದಲಾದವುಗಳನ್ನು ಮುಂಚಿತವಾಗಿಯೇ ನಿಶ್ಚಯಿಸಿ ಕಾರ್ಯಕ್ರಮಗಳನ್ನು ಮುಂಚೆಯೇ ಹಾಕಿಕೊಳ್ಳುವಂತೆ ಇಲ್ಲ. ಯಾವ ದಿನವಾದರೂ, ಯಾವ ಕಾರಣಕ್ಕಾಗಿ ಬೇಕಾದರೂ, ವಿದ್ಯಾರ್ಥಿ ಮುಷ್ಕರ ಆರಂಭವಾಗಬಹುದು. ಪರೀಕ್ಷೆಗಳು ಗೊತ್ತುಗುರಿಯಿಲ್ಲದೆ 20 ದಿವಸ ಅಥವಾ ತಿಂಗಳ ಕಾಲ ಮುಂದಕ್ಕೆ ಹೋಗಬಹುದು. ವಾರ್ಷಿಕ ರಜಾ ದಿನಗಳು, ಎಂದೋ ಆರಂಭವಾಗಬಹುದು. ರಜಾ ಅವಧಿ, ಮೊಟಕಾಗಬಹುದು. ಒಂದು ಶಿಕ್ಷಣಕ್ಕೆ, ನಾಲ್ಕು ಅಥವಾ ಐದು ವರ್ಷಗಳು ಎಂದು ಸಿಗಧಿಯಾಗಿದ್ದರೆ, ಮುಷ್ಕರಗಳ ಸರಮಾಲೆಗಳಿಂದ, ಆ ಶಿಕ್ಷಣದ ಅವಧಿ ಆರು ಅಥವಾ ಏಳು ವರ್ಷಗಳಿಗೆ, ಮುಂದುವರಿಯಬಹುದು. ಈ ಮಧ್ಯದಲ್ಲಿ, ನಪಾಸಾದವರಂತೂ, ವಿಶ್ವವಿದ್ಯಾಲಯದ ಆಶ್ರಯದಲ್ಲಿ, ಹತ್ತು ವರ್ಷಗಳಷ್ಟು ಕಾಲ ಕಳೆಯಬೇಕಾಗುವುದು.

ಮೇಲ್ಕಂಡ ಪರಿಸ್ಥಿತಿಯಲ್ಲಿ ಅಧ್ಯಾಪಕನಾದ ನಾನು ಪ್ರವಾಸಕ್ಕೆಂದು, ಎರಡು ಬಾರಿ ಮುಂಗಡ ಟಿಕೀಟುಗಳನ್ನು ಪಡೆದು, ಎರಡು ಬಾರಿಯೂ ರದ್ದುಗೊಳಿಸಿ, ಸ್ವಲ್ಪ ಹಣವನ್ನೂ ಕಳೆದುಕೊಂಡು, ರೈಲ್ವೆ ಅಧಿಕಾರಿಗಳಿಂದ "ನೀವೆಂತಹ ಅಧ್ಯಾಪಕರಾಗಿದ್ದೀರಿ! ಒಂದು ಪ್ರಯಾಣದ ದಿನವನ್ನು ಸರಿಯಾಗಿ ನಿಶ್ಚಯಿಸಲೂ ನಿಮಗೆ ಯೋಗ್ಯತೆ ಇಲ್ಲವೇ ?" ಎಂಬ ನಿಂದನೆಗೆ ಗುರಿಯಾಗಿ, ಅವರು ಹಿಂತಿರುಗಿ ಕೊಟ್ಟ ಹಣವನ್ನೇ ಪಾಲಿಗೆಬಂದ ಪಂಚಾಮೃತದಂತೆ ಸ್ವೀಕರಿಸಿ, ಈ ಪರಿಸ್ಥಿತಿಗೆ ಯಾರನ್ನು ದೂಷಿಸಬೇಕೆಂದು ತಿಳಿಯದೆ, ನನ್ನ ವಿಧಿಬರಹವನ್ನೇ ಶಪಿಸಿಕೊಂಡು, ಮನೆಗೆ ಹಿಂತಿರುಗಿ, ಮನೆಯಲ್ಲಿ ಮಡದಿ ಮೇಜಿನ ಮೇಲಿಟ್ಟ ಕಾಫಿಯನ್ನು ಹೀರಿ, ನಿದ್ರಾಗುಳಿಗೆಯನ್ನು ತೆಗೆದುಕೊಂಡು ಕೆಲವು ಗಂಟೆಗಳ ಕಾಲ, ನಿದ್ರಾದೇವಿಯ ಮೊರೆ ಹೊಕ್ಕೆ.

ಕೆಲವು ದಿನಗಳ ಬಳಿಕ ಆಕಸ್ಮಿಕವೆಂಬಂತೆ ಪರೀಕ್ಷೆಗಳು ಮುಗಿದು, ರಜಾದಿನಗಳು ಆರಂಭವಾದವು. ಮುಂಗಡಸೀಟು, ಮೊದಲಾದ ಅನುಕೂಲತೆಗಳು ಇರಲಿಲ್ಲ



ವಾದ್ದರಿಂದ ಮಾರನೆಯ ಬೆಳಿಗ್ಗೆ ಬಸ್‌ನಿಲ್ದಾಣಕ್ಕೆ ಹೋಗಿ, ಯಾವ ಊರಿಗೆ ಪ್ರಯಾಣಕ್ಕೆ ಅನುಕೂಲ ದೊರಕುವುದೋ, ಅದೇ ಊರಿಗೆ ಹೋಗುವುದೆಂದು ತೀರ್ಮಾನಿಸಿದೆ. ಗೊತ್ತಾದ ದಿನದಂದು ಬೇಗನೆ ಬಸ್‌ನಿಲ್ದಾಣಕ್ಕೆ ಹೋಗಿದ್ದೆ. ಯಾವ ಬಸ್ಸಿನಲ್ಲಿ ಸ್ಥಳ ದೊರಕುವುದೆಂಬುದನ್ನು ಗೊತ್ತುಮಾಡಿಕೊಳ್ಳಲು, ವಾಹನದಿಂದ ವಾಹನಕ್ಕೆ ಪರದೇಶಿಯಂತೆ, ಸುತ್ತಾಡುತ್ತಲಿದ್ದೆ. ಈ ಬವಣೆಯನ್ನು ಕಂಡ, ಹೆಚ್ಚು ಜನರು ಇರದಿದ್ದ, ಪ್ರಯಾಣಿಕರು ಸಿಗುತ್ತಾರೆಯೇ ! ಎಂಬ ತವಕದಲ್ಲಿದ್ದ ಒಂದು ಖಾಸಗಿ ಬಸ್ಸಿನ ನಿರ್ವಾಹಕನೊಬ್ಬನು "ಬನ್ನಿ ಸ್ವಾಮಿ, ಈ ಬಸ್ ಮಂಗಳೂರಿಗೆ ಹೋಗುತ್ತದೆ. ಸರಕಾರಿ ಬಸ್ ದರಕ್ಕಿಂತ ಎರಡು ರೂಪಾಯಿ ಕಡಿಮೆ ಕೊಡಿ. ದಾರಿಯಲ್ಲಿ ಮಡಕೇರಿ ಸಿಗುತ್ತದೆ, ಬನ್ನಿ ಬೇಗ ಹತ್ತಿ" ಎಂದು ದೈನ್ಯವಾಗಿ ಕೂಗಿಕೊಂಡನು. ಮಡಕೇರಿ ಪ್ರವಾಸಿಗಳ ಸ್ವರ್ಗ ಎಂದು ಪ್ರಾಥಮಿಕ ಶಾಲೆಯಲ್ಲಿ ಓದಿದ್ದ ವಿಚಾರ ನೆನಪು ಬಂತು. ವಾಹನವನ್ನು ಏರಿ ಕುಳಿತೆ. ಅರ್ಧ ಗಂಟೆಯ ನಂತರ, ಸಾಕಷ್ಟು ಪ್ರಯಾಣಿಕರು ದೊರೆತ ಮೇಲೆ, ವಾಹನವು ನಿಧಾನವಾಗಿ ಹೊರಟಿತು. "ಇನ್ನು ಮುಂದೆ ಈ ಕಡೆ ಪ್ರವಾಸಕ್ಕೆ ಹೋಗುವಾಗ, ಮುಂಗಡ ಸೀಟು ಇವುಗಳನ್ನೆಲ್ಲಾ ಮರೆತು, ನೇರವಾಗಿ ನಮ್ಮ ಬಸ್ಸಿಗೇ, ಬನ್ನಿ ಸಾರ್" ಎಂದು ಎಲ್ಲರಿಗೂ ಹೇಳುತ್ತಾ, ಹೊಸದಾಗಿ ನೇಮಕಗೊಂಡಿದ್ದ, ಆ ವಾಹನದ ನಿರ್ವಾಹಕನು, ಮುಗುಳುನಗೆ ಬೀರುತ್ತಾ, ಎಲ್ಲರಿಗೂ ಪ್ರಯಾಣದ ಚೀಟಿಗಳನ್ನು ಹಂಚಲು ಅನುವಾದನು.

ಮೊದಲನೆಯದಾಗಿ ವೃದ್ಧ ಮಹಿಳೆಯೊಬ್ಬಳನ್ನು "ಯಾವ ಊರಿಗೆ ?" ಎಂದು ಕೇಳಿದನು. "ಇದೇನಯ್ಯ ಹೀಗೆ ಕೇಳುತ್ತಿ ! ನಾನು ಪ್ರತಿವಾರವೂ ಪ್ರಯಾಣ ಮಾಡುತ್ತಿದ್ದೇನೆ. ನಮ್ಮ ಯಜಮಾನರು ಈ ತಾಲ್ಲೂಕಿಗೇ ಅತ್ಯಂತ ದೊಡ್ಡ ಅಕ್ಕಿ ಗಿರಣಿ ಮಡಗಾರರು : ನೀನು, ಆ ಅಕ್ಕಿ ಗಿರಣಿ, ಆ ಊರ ಹೆಸರು ಕೇಳಿಲ್ವಾ ?" ಎಂದು ಗುಡುಗಿದಳು. ನಿರ್ವಾಹಕನು ನಿಸ್ಸಹಾಯಕನಾಗಿ ಎರಡು ನಿಮಿಷ ನಿಂತನು. ಇದನ್ನು ಕಂಡು, ಪಕ್ಕದಲ್ಲಿ ಕುಳಿತಿದ್ದ ಮತ್ತೊಬ್ಬ ಮಹಿಳೆಯು "ಅವಳ ಯಜಮಾನರು ಹುಣಸೂರಿನಲ್ಲಿ ಅಕ್ಕಿ ಗಿರಣಿ ನಡೆಸುತ್ತಿದ್ದಾರೆ" ಎಂದು ತಿಳುಹಿಸಿ ನೂತನ ಕಂಡಕ್ಟರ್‌ನ ಸಮಸ್ಯೆಯನ್ನು ಬಗೆಹರಿಸಿದಳು. ಅವಳು ಕೊಟ್ಟ ದೊಡ್ಡಮೊತ್ತದ ಮೊಬಲಗಿಗೆ ಚಿಲ್ಲರೆ ಕೊಡಲು ಕಂಡಕ್ಟರ್ ಬಳಿ ಇರಲಿಲ್ಲ. ಈ ವಿಷಯವನ್ನು ತಿಳಿಸಿದಾಗ "ಅದಕ್ಯಾಕೆ, ಯೋಚನೆ ಮುಂದಿನವಾರ ಕೊಟ್ಟರೆ ಆಯಿತ್ತು. ಬೇಕಾದಷ್ಟು ಕಂಡಕ್ಟರ್‌ಗಳು ನನ್ನ ಹಣವನ್ನು ನುಂಗಿದ್ದಾರೆ. ನೀನೂ ಸ್ವಲ್ಪ ನುಂಗಿದರೆ ದೇವರು ನನಗೇನೂ ಕಮ್ಮಿ ಮಾಡುವುದಿಲ್ಲ" ಎಂದು ಆಸನಕ್ಕೆ ಒರಗಿ ಕಣ್ಮುಚ್ಚಿದಳು.

ನಿರ್ವಾಹಕನು ಎರಡನೇ ಪ್ರಯಾಣಿಕನಾದ ಒಬ್ಬ ಬಾಲಕನ ಬಳಿ ಊರಿನ ಹೆಸರು ಮತ್ತು ಹಣವನ್ನು ಕೇಳಿದನು. ಬಾಲಕನು ಆರು ರೂಪಾಯಿ ಕೊಡಬೇಕಾದ ಜಾಗದಲ್ಲಿ ಮೂರು ರೂಪಾಯಿಗಳನ್ನು ಕೊಟ್ಟು " ಚೀಟಿ ಹರಿದು ಕೊಡು " ಎಂದು

ಕೇಳಿದನು. “ ನಿನಗೇಕೆ, ಅರ್ಧದರ ? ನಿನಗೆಷ್ಟು ವಯಸ್ಸು ” ಎಂದು ಹೊಸ ಕಂಡಕ್ಟರ್ ಕೇಳಿದನು. ಆ ಬಾಲಕನು “ ಏಕೆ! ನಾನು ಚಡ್ಡಿ ಹಾಕಿ ಕೊಂಡಿರೋದು ನಿನಗೆ ಕಾಣಿಸ್ತಾ ಇಲ್ವೆ ! ” ಎಂದು ನುಡಿದನು. ನೂತನ ಕಂಡಕ್ಟರ್ “ ಮುಂದಿನ ಸಾರಿ ಅದನ್ನೂ ಹಾಕಿಕೊಂಡು ಬರಬೇಡ ” ಎಂದು ಗೊಣಗುತ್ತಾ ಅರ್ಧ ಚೀಟಿಯನ್ನು ಬಾಲಕನ ಕೈಗಿತ್ತು ಮುಂದಿನ ಪ್ರಯಾಣೀಕನ ಬಳಿಗೆ ಸಾಗಿದನು.

ಮೂರನೆಯ ಪ್ರಯಾಣೀಕನ ಬಳಿ ಹೋದಾಗ “ನಾನು ಹಿಂದಿನ ಸಾರಿ ಪ್ರಯಾಣ ಮಾಡಿದಾಗ, ಈ ಬಸ್ಸಿನ ಹಳೆಯ ಕಂಡಕ್ಟರ್ ನನಗೆ ಚಿಲ್ಲರೆ ಅಭಾವದಿಂದ ಐದು ರೂಪಾಯಿ ಕಡಿಮೆ ಕೊಟ್ಟು ಮುಂದಿನ ಸಾರಿ ಅಡ್ಜಸ್ಟ್ ಮಾಡೋಣ ” ಎಂದು ತಿಳಿಸಿದ್ದ. ನೀನು ಆ ಕಂಡಕ್ಟರ್‌ನನ್ನು ಭೇಟಿಮಾಡಿ ಈ ಸಾರಿ ಪ್ರಯಾಣದ ಹಣವನ್ನು ವಸೂಲು ಮಾಡಿಕೋ ಎಂದು ತಿಳಿಸಿದನು. ನೂತನ ನಿರ್ವಾಹಕನು, ಎರಡು ತಲೆ ನೋವಿನ ಮಾತ್ರೆಗಳನ್ನು ತನ್ನ ಕಿಸೆಯಿಂದ ತೆಗೆದು ನುಂಗಿ ಅರ್ಧಗಂಟೆಯ ಕಾಲ ಹಿಂದಿನ ಆಸನದಲ್ಲಿ ವಿಶ್ರಾಂತಿ ಪಡೆಯ ತೊಡಗಿದನು. ಮಾರ್ಗ ಮಧ್ಯೆ ಊರೊಂದು ಸಿಕ್ಕಾಗ, ಅಲ್ಲಿ ಇಳಿಯ ಬೇಕಾಗಿದ್ದ ಪ್ರಯಾಣೀಕನು, ಕಂಡಕ್ಟರ್‌ನನ್ನು ಎಬ್ಬಿಸಿ ಮೂರು ರೂಪಾಯಿಗಳನ್ನು ತೆತ್ತು, ವಾಹನದಿಂದ ಇಳಿದು ಹೊರಟನು.

ನಿರ್ವಾಹಕನು ನಿದ್ರೆಯಿಂದ ಎಚ್ಚೆತ್ತು, ಹೊಸಹುರುಪಿನಿಂದ ಪುನಃ ಚೀಟಿ ಹಂಚುವ ಕೆಲಸಕ್ಕೆ ಹೊರಟನು. ಮತ್ತೊಂದು ಹುಡಗಿಯನ್ನು ಕೇಳಿದನು. “ ನಾನು ಇಳಿಯ ಬೇಕಾದ ಸ್ಥಳ, ಅರಣ್ಯದಂತಿರುವ ಪ್ಲಾಂಟೇಷನ್ ಮಧ್ಯೆ ಒಂದು ಗುಡಿಸಲಿನ ಬಳಿ ಇದೆ. ಆ ಸ್ಥಳ ನನಗೆ ಸರಿಯಾಗಿ ಗೊತ್ತಿಲ್ಲ. ಹಿಂದಿನ ಕಂಡಕ್ಟರ್ ಆ ಸ್ಥಳ ಬಂದಾಗ ನನ್ನನ್ನು ಇಳಿಸುತಿದ್ದ. ಈಗ ನನ್ನ ಗತಿ ಏನು ? ” ಎಂದು ರೋದಿಸ ತೊಡಗಿದಳು. ಇದರಿಂದ ದಿಗ್ಭ್ರಾಂತನಾದ ನಿರ್ವಾಹಕನು ಏನೂ ಮಾತನಾಡದೆ ಮುಂದಿನ ಪ್ರಯಾಣೀಕನ ಬಳಿ ಹೆಜ್ಜೆ ಹಾಕಿದನು. ಈ ಬಾರಿ ವಿದೇಶದಿಂದ ಬಂದಿದ್ದ ಒಂದು ಜೋಡಿಯನ್ನು ಪ್ರಶ್ನಿಸಿದನು. “ we do not know your language, you take us to some interesting place, where we can have our honey moon ” ಎಂಬ ಉತ್ತರ ಬಂತು. “ Pay hundred rupecs” ಎಂದು ತನಗೆ ತಿಳಿದಿದ್ದ ಆಂಗ್ಲಭಾಷೆಯನ್ನು ಉಪಯೋಗಿಸಿ ಆಕಷ್ಟದಿಂದ ಪಾರಾಗಿ ಮುಂದೆ ಹೋದನು. ಈ ಸಾರಿ “ ಗ್ರಾಮವೊಂದರಿಂದ ಪ್ರೌಢ ಶಾಲಾ ಶಿಕ್ಷಣವನ್ನು ಮುಗಿಸಿದ್ದ ಬಾಲಕನ ಸರದಿ ಬಂತು. ಆ ಬಾಲಕನು “ ನಾನು ಉದ್ಯೋಗವನ್ನು ಹುಡುಕಲು ಹೊರಟಿದ್ದೇನೆ. ಯಾವ ಊರಿನಲ್ಲಿ ಪ್ರಯತ್ನ ಪಟ್ಟರೆ ಸಿಗಬಹುದು ಎಂದು ನಿನ್ನ ಮನಸ್ಸಿಗೆ ತೋಚುತ್ತದೋ ಆ ಊರಿಗೆ ಚೀಟಿಯನ್ನು ಕೊಡು ” ಎಂದು ಹೇಳಿದನು.



“ ಕುಶಾಲ ನಗರ ಒಳ್ಳೆಯ ಸ್ಥಳ ಎಂದು ಕೇಳಿದ್ದೇನೆ. ಅಲ್ಲಿ ನಿನಗೆ ಅನುಕೂಲವಾಗ ಬಹುದು. ಪ್ರಯತ್ನ ಮಾಡು. ದೇವರು ನಿನಗೆ ಒಳ್ಳೆಯದು ಮಾಡಲಿ. ನಿನಗೆ ಅನುಕೂಲವಾದ ಕೆಲಸ ಸಿಕ್ಕರೆ, ನನಗೂ ಬೇರೆ ಕೆಲಸ ಕೊಡಿಸಲು ಪ್ರಯತ್ನ ಮಾಡು. ನಾನು ಈ ಕೆಲಸಕ್ಕೆ ರಾಜೀನಾಮೆ ನೀಡುತ್ತೇನೆ ” ಎಂದು ಉತ್ತರಿಸುತ್ತಾ ಕುಶಾಲ ನಗರದ ಚೀಟಿಯನ್ನು ಹರಿದು ಕೊಟ್ಟನು.

ಈ ಸಂಭಾಷಣೆಗಳನ್ನು ಸರಸದಿಂದ ತಲ್ಲೀನನಾಗಿ ಆಲಿಸುತ್ತಾ ಕುಳಿತಿದ್ದ ನನಗೆ ನನ್ನ ಪ್ರಯಾಣದ ಉದ್ದೇಶ್ಯ, ನಾನು ಇಳಿಯಬೇಕೆಂದು ನಿಶ್ಚಯಿಸಿದ್ದ ಸ್ಥಳ, ಮೊದಲಾದವು ಮರೆತು ಹೋಗಿದ್ದುವು. ನಂತರ ಎಚ್ಚೆತ್ತು ವಿಚಾರಿಸಿದಾಗ, ನಾನು ಇಳಿಯಬೇಕೆಂದಿದ್ದ ಮಡಕೇರಿಯು ಕಳೆದು, ಎರಡು ನಿಲ್ದಾಣಗಳನ್ನು ದಾಟಿ, ವಾಹನವು ಬಂದಿತ್ತೆಂದು ಅರಿವಾಯಿತು. ನಾನು ಚೀಟಿ ಪಡೆದಿರಲಿಲ್ಲವೆಂಬುದನ್ನೂ ಗಮನಿಸಿದ, ಕೂಡಲೇ ಇಳಿದು, ಅಭಿಮುಖವಾದ ದಿಕ್ಕಿನಲ್ಲಿ ಬರುತ್ತಿದ್ದ ವಾಹನವೊಂದರಲ್ಲಿ ಪ್ರಯಾಣ ಮಾಡಿ, ಮಡಕೇರಿಯನ್ನು ತಲುಪಿ, ಅಲ್ಲಿನ ಪ್ರಕೃತಿ ಸೌಂದರ್ಯಗಳನ್ನು ಸವಿಯಲು ಆರಂಭಿಸಿದೆ. ಎರಡು ದಿನಗಳು ಅಲ್ಲಿ ತಂಗಿದ್ದು ಮೂರನೆಯ ದಿವಸ ಸ್ವಂತ ಊರಿಗೆ ಹಿಂತಿರುಗಲು ವಾಹನವೊಂದನ್ನು ಏರಿ ಕುಳಿತೆ. ಪುನಃ ಅದೇ ನಿರ್ವಾಹಕನು “ ಏನು ಸ್ವಾಮಿ ! ಪ್ರವಾಸ ಹೇಗಿತ್ತು ? ಮಡಕೇರಿಯ ಸೌಂದರ್ಯವನ್ನು ಸವಿದಿರಾ ? ಎರಡು ದಿನಗಳ ಹಿಂದೆ ಇದೇ ವಾಹನದಲ್ಲಿ, ನೀವು ಇಲ್ಲಿಗೆ ಬಂದಿದ್ದು ನನಗೆ ನೆನಪಿದೆ ” ಎಂದು ಮುಗುಳ್ನಗೆ ಸೂಚಿಸುತ್ತಾ ಸ್ವಾಗತಿಸಿದನು. ನನ್ನ ಮನಸ್ಸಿನಲ್ಲಿ ಹಳೇ ಪ್ರಯಾಣದ ಮೊತ್ತವನ್ನೂ ವಸೂಲಿ ಮಾಡುವನೋ ಎಂದು ಚಿಂತೆ ಕೊರೆಯುತ್ತಿತು. ದೈವವಶಾತ್ ಕಂಡಕ್ಟರ್ ಆ ಬಗ್ಗೆ ಪ್ರಸ್ತಾಪಿಸಲಿಲ್ಲ. ಸುರಕ್ಷಿತವಾಗಿ ಊರಿಗೆ ಹಿಂದಿರುಗಿ ಮುಂದಿನ ವ್ಯಾಸಂಗ ವರ್ಷದ ಪುನರಾರಂಭದ ದಿನ ಮತ್ತು ನಾನು ಬೋಧಿಸಬೇಕಾಗುವ ಪಠ್ಯ ವಿಷಯ ಇವುಗಳ ಬಗ್ಗೆ ಚಿಂತಿಸತೊಡಗಿದೆ. ●

## ಸ್ಥಾನಮಾನ

**ಕೆ. ವಿರೂಪಾಕ್ಷಗೌಡ**

ಅಧಿಕಾರ ಗದ್ದುಗೆಯು ಪಾಶ್ಚಾತ್ಯ ಹೆಣ್ಣು
ಹತ್ತು ಕಡೆ ಹರಿದಾಟ ಬಹು ಸ್ವೇಚ್ಛೆ ಕಣ್ಣು
ಕೈ ಹಿಡಿಯೆ ಬಿಡಲಾರದಂಥ ಹುಡಿಗಿ
ದಾಸರಾದೆವೋ ? ಖಾಲಿ ! ಹೆಂಡದ ಮಗಿ

**ನಯವನ್ನರಿತವನು ಲೋಕವನ್ನು ಜಯಿಸುತ್ತಾನೆ.**

—ಕೌಟಿಲ್ಯ

# ಮಕರ ಸಂಕ್ರಮಣ

ಪ॥ ಚನ್ನಪ್ಪ ಎರೇಸೀಮೆ

ಮಕರ ಮೊದಲಾಗಿ ಆರು ರಾಶಿಗಳಲ್ಲಿ ಸಹಸ್ರ ಮರೀಚಿಮಾಲಿನಿಯೆನಿಸಿದ ಭಗವಾನ್ ಸೂರ್ಯದೇವನು ಸಂಚರಿಸುವ ಕಾಲವೇ ಉತ್ತರಾಯಣ. ಈ ಉತ್ತರಾಯಣ ಪ್ರಾರಂಭವಾಗುವುದು ಸೂರ್ಯ ಮಕರರಾಶಿಯನ್ನು ಪ್ರವೇಶಿಸಿದೊಡನೆ. ಆ ಕಾಲ ಪುಣ್ಯಕಾಲವೆಂದು ಪ್ರಾಚೀನ ಭಾರತೀಯ ವಿಜ್ಞಾನಿಗಳು ಗುರುತಿಸಿದ್ದಾರೆ. ಅದಕ್ಕೆ ಆ ಪವಿತ್ರ ಮುಹೂರ್ತವನ್ನು ಉತ್ತರಾಯಣ ಪುಣ್ಯಕಾಲವೆಂದೂ ಮಕರಸಂಕ್ರಮಣ ಪುಣ್ಯಕಾಲವೆಂದೂ ಕರೆದು ಸೂರ್ಯಾರಾಧನೆ ಮಾಡುವುದು ವೇದಕಾಲದಿಂದಲೂ ನಡೆದುಬಂದ ಹಿಂದೂ ಜನಾಂಗದ ಸತ್ಸಂಪ್ರದಾಯವಾಗಿದೆ. ಈ ಪುಣ್ಯಕಾಲದಲ್ಲಿ ನದಿಗಳು. ಸಂಗಮ ಸ್ಥಾನಗಳು, ತೀರ್ಥಕ್ಷೇತ್ರಗಳೇ ಮೊದಲಾದ ಕಡೆಗಳಿಗೆ ಹೋಗಿ ಸ್ನಾನ ಜಪತಪಾದಿಗಳನ್ನು ಭಾವುಕರಾದ ಹಿಂದೂಗಳು ಆಚರಿಸುವುದರ ಮೂಲಕ ಮಾನಸಿಕ ನೆಮ್ಮದಿಯನ್ನು ಪಡೆಯುತ್ತಾರೆ. ಉದ್ಯಾಪನೆ, ದೀಪದಾನ, ಉಪವಾಸ, ಹರಿಹರ ಪೂಜೆ, ಉಮಾಮಹೇಶ್ವರಪೂಜೆ, ಗೋಪೂಜೆ ಇತ್ಯಾದಿ ಸ್ಥಳೀಯ ಸನ್ನಿವೇಶಗಳಿಗನುಸರಿಸಿ ಅನೇಕ ವಿಧದಲ್ಲಿ ಈ ಹಬ್ಬವನ್ನು ಆಚರಿಸುವಿಕೆಯಲ್ಲಿ ವೈವಿಧ್ಯ ಕಂಡುಬಂದರೂ ಮೂಲ ಮಂತ್ರವೊಂದೇ. ಮುಖ್ಯವಾಗಿ ಈ ಹಬ್ಬ ಋತುಬದಲಾವಣೆಯ ಹಬ್ಬ, ಸೂರ್ಯನು ದಕ್ಷಿಣಾಯಣದಿಂದ ಉತ್ತರಾಯಣಕ್ಕೆ ತಿರುಗುವ ಪರ್ವಕಾಲ. ಆದುದರಿಂದ ಇದನ್ನು ಸೂರ್ಯನ ಆರಾಧನೆಗೆ ಸಂಬಂಧಿಸಿದ ಹಬ್ಬವೆನ್ನಬೇಕು. ಭಗವದ್ಗೀತೆಯಲ್ಲಿ ಈ ಪರ್ವಕಾಲದ ಬಗೆಗೆ

ಅಗ್ನಿ ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಂ
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋಜನಾಃ (8-24)

ಎಂದು ಹೇಳಿದೆ. ಆದಿತ್ಯದೇವನ ಸಂಚಾರ ಮಾರ್ಗಗಳೆರಡು ; ಒಂದು ಕೃಷ್ಣವರ್ಣದ ದಕ್ಷಿಣಾಯಣ, ಇನ್ನೊಂದು ಶುಕ್ಲವರ್ಣದ ಉತ್ತರಾಯಣ. ದೇವತೆಗಳ ರಾತ್ರಿಯೇ, ದಕ್ಷಿಣಾಯಣ, ಅವರ ಹಗಲೇ ಉತ್ತರಾಯಣ. ಈ ಉತ್ತರಾಯಣದಲ್ಲಿ ಮೃತರಾದ ಬ್ರಹ್ಮಜ್ಞರಾದ ಯೋಗಿ ಜನಗಳು ಅಗ್ನಿ, ಜ್ಯೋತಿ, ಅಹಸ್ಸು, ಶುಕ್ಲ ಮೊದಲಾದ ಅಭಿಮಾನಿದೇವತೆಗಳ ದ್ವಾರ ಬ್ರಹ್ಮನಲ್ಲಿ ಐಕ್ಯಗೊಳ್ಳುತ್ತಾರೆಂದು ಅಭಿಪ್ರಾಯ ವ್ಯಕ್ತಪಡಿಸಿದೆ.

ಅಂತೆಯೇ ಕುರುಕ್ಷೇತ್ರದಲ್ಲಿ ಅರ್ಜುನನ ಬಾಣಗಳಿಂದ ಜರ್ಝರಿತಗೊಂಡು ಭೂಮಿಗೊರಗಿದ ಭೀಷ್ಮರು ದಕ್ಷಿಣಾಯಣದಲ್ಲಿ ಮರಣವನ್ನಪ್ಪಲು ಇಚ್ಛಿಸದೆ 58 ದಿನ



ಗಳವರೆಗೆ ಶರಪಂಜರದ ಹಾಸಿಗೆಯ ಮೇಲೆ ಮಲಗಿ ತನ್ನ ಪ್ರಾಣಗಳನ್ನು ಇಚ್ಛಾಮರಣಿಯಾದ ಅವನು ತಡೆದು ನಿಲ್ಲಿಸಿ ಉತ್ತರಾಯಣ ಪ್ರಾರಂಭವಾದೊಡನೆ ನಿಷ್ಕ್ರಮಣಗೊಳಿಸಿದ ಬಗೆಗೆ ಮಹಾಭಾರತದಲ್ಲಿ ಹೀಗೆ ಹೇಳಿದೆ.

ಪಶ್ಯಧ್ವಮುಪಧಾನಂ ಮೇ ಪಾಂಡವೇನಾಭಿಸಂಧಿತಂ ।
ಶಯೇಯಮಸ್ಯಾಂ ಶಯ್ಯಾಯಾಂ ಯಾವದಾವರ್ತನಂ ರವೇಃ ।
ಯೇ ತದಾ ಧಾರಯಿಷ್ಯಂತಿ ತೇಚ ಪ್ರೇಕ್ಷ್ಯಂತಿ ಮಾಂ ನೃಪಾಃ ॥
ದಿಶಂ ವೈಶ್ರವಣಾಕ್ರಾಂತಾಂ ಯದಾಗಂತಾ ದಿವಾಕರಃ ॥
ನೂನಂ ಸಪ್ತಾಶ್ವಯುಕ್ತೇನ ರಥೇನೋತ್ತಮತೇಜಸಾ
ರಕ್ಷೇಹಂ ವೈ ಮಮ ಪ್ರಾಣಾನ್ ಸಹೃದಃ ಸುಪ್ರಿಯಾನಿವ ॥
( ಭೀ. ಪ 4-120. 51-52-53 )

ಸೂರ್ಯನು ದಕ್ಷಿಣಾಯಣದಿಂದ ಉತ್ತರಾಯಣಕ್ಕೆ ಆವರ್ತನಗೊಳ್ಳುವವರೆಗೆ ಈ ಹಾಸಿಗೆಯ ಮೇಲೆಯೇ ಅಂದರೆ ಬಾಣಗಳ ಹಾಸಿಗೆಯ ಮೇಲೆಯೇ ಮಲಗಿರುತ್ತೇನೆ. ಕುಬೇರ ದಿಕ್ಕಿಗೆ ಅಂದರೆ ಉತ್ತರದಿಕ್ಕಿಗೆ ಯಾವಾಗ ಸೂರ್ಯನು ಅಭಿಮುಖನಾಗುವನೋ ಅಲ್ಲಿಯವರೆಗೆ ಎಲ್ಲ ನೃಪರೂ ನನ್ನನ್ನು ನೋಡಲಿ. ಸಪ್ತಾಶ್ವಯುಕ್ತವಾದ ರಥದಲ್ಲಿ ನೂತನವಾದ ಶ್ರೇಷ್ಠ ತೇಜಸ್ಸಿನಿಂದ ಸೂರ್ಯದೇವನು ಉತ್ತರಾಭಿಮುಖವಾಗುವವರೆಗೆ ನನ್ನ ಪಂಚಪ್ರಾಣಗಳನ್ನು ಅತ್ಯಂತ ಪ್ರೀತಿಪಾತ್ರರಾದ ಸ್ನೇಹಿತರನ್ನು ರಕ್ಷಿಸುತ್ತೇನೆ, ಎನ್ನುತ್ತಾನೆ, ಭೀಷ್ಮಾಚಾರ್ಯ. ಈ ಕಾರಣದಿಂದ ಪ್ರಾಚೀನ ಕಾಲದಿಂದಲೂ ಭಾರತೀಯರ ಭಾವನೆಯಲ್ಲಿ ಉತ್ತರಾಯಣವು ತನ್ನ ಪಾವಿತ್ರ್ಯದ ಅಧಿಕಾರ ಮುದ್ರೆಯೊತ್ತಿರುವುದನ್ನು ಗಮನಿಸಬಹುದು. ಉತ್ತರಾಯಣ ಪುಣ್ಯಕಾಲದಿಂದ ಮೊದಲ್ಗೊಂಡು ಸೂರ್ಯನು ನೂತನ ತೇಜೋವಿಶೇಷದಿಂದ ಕೂಡುತ್ತಾನೆ. ಅಂದಿನಿಂದ ದಿನೇ ದಿನೇ ಅವನ ತೇಜಸ್ಸು ವೃದ್ಧಿಗೊಂಡು ಚಳಿಗಾಲದಿಂದ ಬರಡುಗೊಂಡ ವನಧಾತ್ರಿ ನವರಸಭರಿತೆಯಾಗಿ ನೂತನ ರಸಲಾಭವನ್ನೇ ಗಿಡ ಮರ ಬಳ್ಳಿಗಳಿಗೊದಗಿಸುತ್ತವೆ. ಭೂಮಂಡಲವನ್ನೆಲ್ಲ ವ್ಯಾಪಿಸಿದ ಪ್ರಖರ ರಶ್ಮಿಗಳು ಎಲ್ಲ ಪ್ರದೇಶಗಳಿಂದಲೂ ಉದಕವನ್ನು ಸಂಗ್ರಹಿಸಿ ರಾತ್ರಿಯಕಾಲಕ್ಕೆ ಅಂದರೆ ದಕ್ಷಿಣಾಯಣ ಕಾಲಕ್ಕೆ ಸರಿಯಾಗಿ ಪ್ರಭೂತ ವೃಷ್ಟಿಪತನಕ್ಕೆ ಕಾರಣವಾಗುತ್ತದೆಂದೇ ಪ್ರಾಚೀನ ಭಾರತೀಯ ತತ್ವಜ್ಞರ ನಂಬುಗೆ.

ಆದ್ದರಿಂದಲೇ ಭಾರತೀಯ ಪ್ರಾಚೀನ ಋಗ್ವೇದ ಮೊದಲ್ಗೊಂಡು ಪುರಾಣ ಸಾಹಿತ್ಯದ ಕಾಲದವರೆಗೆ ಸೂರ್ಯನನ್ನು ಕುರಿತ ಪ್ರಾರ್ಥನೆಗಳಿಗೆ ಕೊರತೆಯಿಲ್ಲ ‘ಎಲೈ ಬೃಹತ್ಕಾಯನಾದ ಭಾಸ್ಕರನೇ ನಿನಗೆ ಮಂಗಳ! ಬ್ರಹ್ಮಾಂಡದಲ್ಲಿ ನೀನು ಚಿಕ್ಕವನಾಗಿ ಕಾಣುತ್ತಿದ್ದರೂ ನಮಗಾದರೋ ಭೀಮಾಕಾರ ತೇಜಸ್ಸು ಆಗಿರುವೆ. ಎಲೈ ದಿವ್ಯೋದ್ಧಾರಕನೇ ನಿನಗೆ ಕುಶಲ! ಲೋಕದ ಸಮಸ್ತ ಚೇಷ್ಟೆಗಳಿಗೆ ನೀನು ಕಾರಣೀ

ಭೂತನಾಗಿದ್ದೀಯೋ. ಜನಜೀವನದ ಮಾನಸೋಲ್ಲಾಸಕ್ಕೆ ನೀನು ಕಾರಣಕರ್ತನಾಗಿದ್ದೀಯೆ, ಈ ಭೂಮಂಡಲವನ್ನು ನಿನ್ನ ಆಕರ್ಷಣವೆಂಬ ಇಂದ್ರಜಾಲ ಬಲವುಳ್ಳ ಸೂಕ್ಷ್ಮ ತಂತುಗಳಿಂದ ಬಂಧಿಸಿ ಈ ನಭೋಮಂಡಲದಲ್ಲಿ ಬಿಗಿದು ನಿಲ್ಲಿಸಿ, ನಿನ್ನ ಪ್ರಭೂತ ಕಿರಣ ವೃಷ್ಟಿಗೊಳಗುಗೊಳಿಸಿ ಕಾಪಾಡುತ್ತಿದ್ದೀಯಲ್ಲವೆ ! ನೀನುಂಟು ಮಾಡಿದ ವಸಂತೋದಯದಲ್ಲಿ ಮಾನವ ಕೋಟಿಯ ಮನೆಯಾದ ಈ ಭೂತಳವು ತಳಿರಿಡಿದು, ಪೂತು, ಕಾತು, ನೂತನ ಜವ್ವನದ ಲಾವಣ್ಯದಿಂದಲಂಕೃತವಾಗಿ ಮೆರೆಯುವುದನ್ನು ಕಂಡು ನೇತ್ರಾನಂದ ಹೊಂದದವರಾರು ? ಹೃದಯ ತುಂಬಿ ಹಾಡದವರಾರು ?

ಅತ್ಯಂತ ಮಹತ್ತಾದುದು ಮೊದಲ್ಗೊಂಡು ಪರಮಾಣುವಿನವರೆಗೂ ಸಕಲ ವಸ್ತುಗಳಲ್ಲಿ ನಿನ್ನ ಕಾರ್ಯವು ಸುವ್ಯಕ್ತವಾಗುವುದಲ್ಲವೇ ? ನಿನ್ನ ಲೋಕ ವಿಸ್ತರಣಕಾರ್ಯವನ್ನೇನೆಂದು ಬಣ್ಣಿಸಲಿ! ಇಗೋ ನಿನ್ನ ಶಕ್ತಿಗೆ ನಮಸ್ಕರಿಸಿ, ನಿನ್ನ ಸಾಮರ್ಥ್ಯಕ್ಕೆ ಮೆಚ್ಚಿ ನಿನ್ನನ್ನು ಕೊಂಡಾಡುತ್ತೇವೆ, ಇತ್ಯಾದಿಯಾಗಿ ಸೂರ್ಯನನ್ನು ಹೊಗಳುತ್ತಾನೆ ಮನುಷ್ಯ.

ಋಗ್ವೇದದಲ್ಲಿ ಸೂರ್ಯನನ್ನು ಕುರಿತ ಋಕ್ಕುಗಳು ಅನೇಕ. ಅಲ್ಲಿನ ಒಂದು ಮಂತ್ರದಲ್ಲಿ ಸೂರ್ಯನು ಸಕಲ ಜಗತ್ತಿನ ಆತ್ಮಸ್ವರೂಪನೆನ್ನಲಾಗಿದೆ.

ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯವರುಣಸ್ಯಾಗ್ನೇಃ
ಅಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾಜಗತಸ್ತಸ್ಥುಷಶ್ಚ ॥

(1-115-1)

ಹೀಗೆಂದರೆ : ಆಶ್ಚರ್ಯಕಾರಕವಾದ ಸ್ವರೂಪವುಳ್ಳದ್ದೂ ಮಿತ್ರವರುಣ ಮತ್ತು ಅಗ್ನಿಗೆ ಕಣ್ಣಿನಂತಿರುವುದೂ ಜಗತ್ಪ್ರಕಾಶಕವೂ ಆದ ಸೂರ್ಯಮಂಡಲವು ಉದಯಿಸಿ ದ್ಯಾವಾ ಪೃಥಿವೀ ಮತ್ತು ಅಂತರಿಕ್ಷಲೋಕಗಳನ್ನೆಲ್ಲ ವ್ಯಾಪಿಸಿದೆ. ಈ ಜ್ಯೋತಿರ್ಮಂಡಲಾಂತವರ್ತಿಯಾದ ಸೂರ್ಯನು ಚರಾಚರಾತ್ಮಕವಾದ ಸಕಲ ಜಗತ್ತಿಗೂ ಆತ್ಮನಾಗಿದ್ದಾನೆ ಎಂದು ಅರ್ಥ. ಇನ್ನೊಂದು ಮಂತ್ರ ನೋಡಿ.

ಸೂರ್ಯೋ ದೇವೀಮುಷಸಂ ರೋಚಮಾನಾಂ ಮರ್ಯೋನ ಯೋಷಾಮ ಭ್ಯೆತಿ ಪಶ್ಚಾತ್ ।
ಯತ್ರಾ ನರೋ ದೇವಯಂತೋ ಯುಗಾನಿ ವಿತನ್ವತೇ ಪ್ರತಿ ಭದ್ರಾಯ ಭದ್ರಂ ॥

(1-115 2)

ಇದರರ್ಥ ಹೀಗೆ : ಉಷಸ್ಸಿನ ಉದಯವಾದೊಡನೆಯೇ ಯಾಗಕರ್ತೃಗಳು ಸೂರ್ಯಾದಿಗಳನ್ನು ಯಾಗಗಳಿಂದ ಪೂಜಿಸಲಿಚ್ಛೆಯುಳ್ಳವರಾಗಿ ಆಯಾ ಕಾಲದಲ್ಲಿ ಮಾಡಬೇಕಾದ ಕರ್ಮಗಳನ್ನು ಆಚರಿಸುತ್ತಾರೆ. ಸುಂದರಳಾದ ಸ್ತ್ರೀಯನ್ನು ಪುರುಷನು ಹಿಂಬಾಲಿಸುವಂತೆ ಸೂರ್ಯನು ಕಾಂತಿಯುತಳಾದ ಉಷಸ್ಸನ್ನು ಹಿಂಬಾಲಿಸುತ್ತಾನೆ. ಇಂಥ ಮಂಗಳಕರವಾದ ಸೂರ್ಯನನ್ನು ನಮ್ಮ ಕಲ್ಯಾಣಕ್ಕಾಗಿ ಭಜಿಸೋಣ.





ಇಂಥ ಅನೇಕ ಮಂತ್ರಗಳನ್ನು ಋಗ್ವೇದದಲ್ಲಿ ಕಾಣುತ್ತೇವೆ. ಒಂದು ಮಂತ್ರದಲ್ಲಿ ಸೂರ್ಯನನ್ನು 'ನಭದ ಸ್ವರ್ಣಾಭರಣ' ಎಂದು ಕರೆಯಲಾಗಿದೆ. ವೇದಕಾಲಾನಂತರದ ಪುರಾಣಕಾಲಕ್ಕಾಗಲೇ ಸೂರ್ಯನನ್ನು ವಿಭೂತಿರೂಪದಲ್ಲಿ ಪೂಜಿಸಲಿಕ್ಕೆ ತೊಡಗಿದರು. ಆಗ ಅವನೊಬ್ಬ ಮೂರ್ತಿಯಾದ. ಅವನ ಸುತ್ತ ಅವನ ಸಂಸಾರದ ಒಂದು ಸುಂದರ ಚಿತ್ರವೇ ನಿರ್ಮಾಣಗೊಂಡು ಉಳಿದೆಲ್ಲ ದೇವತೆಗಳ ಕಥೆಗಳಂತೆ ಇವನ ಬಗ್ಗೆಯೂ ಕಥನ ಪುರಾಣ ಸಾಹಿತ್ಯ ನಿರ್ಮಾಣಗೊಂಡಿತು. ಮಹಾಭಾರತ, ವಿಷ್ಣು, ಭಾಗವತ, ವಾಯು, ಬ್ರಹ್ಮ, ಮತ್ಸ್ಯ, ಲೈಂಗ್ಯಾದಿ ಅನೇಕ ಪುರಾಣಗಳಲ್ಲಿ ಇವನ ಬಗೆಗೆ ಕಥೆ ಹೆಣೆಯಲಾಯಿತು.

ಇವನ ತಂದೆ ಕಶ್ಯಪ, ತಾಯಿ ಅದಿತಿ; ಧಾತೃ, ಅರ್ಯಮ, ಶಕ್ರ, ವರುಣ ಅಂಶ, ಭಗ, ವಿವಸ್ವಂತ, ಪೂಷ, ಸವಿತೃ, ತ್ವಷ್ಟೃ, ವಿಷ್ಣು-ಮೊದಲಾದವರು ಇವನ ಸಹೋದರರು. ಸಂಜ್ಞಾದೇವಿ ಹೆಂಡತಿ. ಇವಳ ಹೊಟ್ಟೆಯಲ್ಲಿ ಯಮ, ಮನು, ಯಮುನೆ ಎಂಬ ಮಕ್ಕಳು. ಸಂಜ್ಞಾದೇವಿಯ ಪ್ರತಿಬಿಂಬವಾದ ಛಾಯದೇವಿ, ಎಂಬುವಳಲ್ಲಿ ಸಾವರ್ಣಿ ಮತ್ತು ಶನೈಶ್ವರರೆಂಬ ಮಕ್ಕಳು, ಇವರಲ್ಲದೆ ಸೂರ್ಯನಿಗೆ ರಾಜ್ಞಿ ಪ್ರಭೆಯೆಂಬ ಇನ್ನಿಬ್ಬರು ಹೆಂಡರು. ಅವರ ಹೊಟ್ಟೆಯಲ್ಲಿ ಮಕ್ಕಳು ಹೀಗೆ ದೊಡ್ಡದೊಂದು ಸಂಸಾರಚಕ್ರದ ಕಥೆಯೇ ಸೂರ್ಯನ ಸುತ್ತ ಪ್ರತಿಮಾರೂಪದಲ್ಲಿ ಹೆಣೆದು ಹೋಗುತ್ತದೆ. ಅವನ ಪರಾಕ್ರಮದ ವರ್ಣನೆ, ಅವನ ಉಪಾಸನೆಯ ಮಹತ್ವ, ಫಲ ಇವೆಲ್ಲ ಬೆಳೆದು ಸೂರ್ಯಾರಾಧನೆಗೆ ಪ್ರತಿಮೆಗಳು ಕಾಣಿಸಿಕೊಳ್ಳತೊಡಗಿದವು. ಈ ಕಾರಣದಿಂದಲೇ ಭಾರತಾದ್ಯಂತ ದೇಗುಲಗಳು ನಿರ್ಮಾಣಗೊಂಡು ಉಳಿದ ದೇವತೆಗಳಂತೆ ಅವನೂ ಪೂಜೆಗೊಳ್ಳತೊಡಗಿದ. ಅಭೀಷ್ಟಸಿದ್ಧಿಗೆ ಮಹತ್ತರ ಶಕ್ತಿ ಸಾಮರ್ಥ್ಯ ಸಂಪಾದನೆಗೆ, ರೋಗನಿವಾರಣೆಗೆ ಇವನೂ ಕಾರಣ ಪುರುಷನೆಂದು ಉಪಾಸನೆ ಪ್ರಾರಂಭಿಸಿದರು. ಕುಂತಿ ಸೂರ್ಯಮಂತ್ರ ಪಠಿಸಿ ಕನ್ಯೆತನದಲ್ಲಿಯೇ ಶೂರನಾದ ಕರ್ಣನನ್ನು ಪಡೆದಳಂತೆ. ವಶಿಷ್ಠ ತನ್ನ ಇಷ್ಟಾರ್ಥಸಿದ್ಧಿಗಾಗಿ ಸೂರ್ಯಸ್ತೋತ್ರಮಾಡಿದ. ಅಕ್ಷಯಪಾತ್ರೆ ಪಡೆಯಲು ಯುಧಿಷ್ಠಿರ ಸೂರ್ಯಾಷ್ಟೋತ್ತರ ಶತಕಸ್ತೋತ್ರಮಾಡಿದನೆಂಬುದು ಮಹಾಭಾರತದ ವನಪರ್ವದಲ್ಲಿ ಪ್ರಸಿದ್ಧ. ಯಾಜ್ಞವಲ್ಕ್ಯಮುನಿ ತನ್ನ ಗುರುವಾದ ವೈಶಂಪಾಯನನಿಂದ ಶಾಪ ಪಡೆದು ಆತನಲ್ಲಿ ಕಲಿತ ವಿದ್ಯೆಯನ್ನೆಲ್ಲಾ ವಾಂತಿಮಾಡಿದ ತರುವಾಯ ಮರಳಿ ವೇದಾಭ್ಯಾಸಕ್ಕಾಗಿ ಸೂರ್ಯನನ್ನು ಪ್ರಾರ್ಥಿಸಿದ. ರಾವಣ ವಧೆಯ ಇಷ್ಟಾರ್ಥಸಿದ್ಧಿಗೆ ಶ್ರೀರಾಮಚಂದ್ರನು ಸೂರ್ಯ ಸ್ತೋತ್ರಮಾಡಿದ ಅಂಶ ರಾಮಾಯಣದಲ್ಲಿ ಪ್ರಸಿದ್ಧ. ಇದನ್ನು ಆದಿತ್ಯ ಹೃದಯವೆಂದು ಕರೆಯಲಾಗಿದೆ. ಹೀಗೇ ಅನೇಕ ರೀತಿಯಲ್ಲಿ ಸೂರ್ಯನು ಜನತೆಯ ಉಪಾಸನೆಗೆ ವಿಗ್ರಹವಾಗಿ ಕುಳಿತುಬಿಟ್ಟ, ಮಯೂರ ಕವಿ ತನ್ನ

ಕುಷ್ಠರೋಗ ನಿವಾರಣೆಗೆ ಸೂರ್ಯಾಷ್ಟಕವನ್ನು ಹಾಡಿ ಆ ರೋಗದಿಂದ ಮುಕ್ತನಾದ ನೆಂಬ ಕಥೆ ಸಾಹಿತ್ಯ ಚರಿತ್ರೆಯಲ್ಲಿ ಪ್ರಸಿದ್ಧ. ಪ್ರದ್ಯೋತನ, ಕರ್ಮಸಾಕ್ಷಿ, ಜಗದ್ದೃಕ್, ಜಗಚ್ಚಕ್ಷು, ಸೂರ, ಭಾಸ್ವಾನ್, ಆದಿತ್ಯ, ಭಾನು, ರವಿ, ದಿನ ಮಣಿ, ದಿವಾಕರ, ದಿವಸ್ಕರ, ಅಹಸ್ಕರ, ಭಾಸ್ಕರ, ಮಾರ್ತಾಂಡ, ಇನ, ತರಣಿ, ದ್ಯುಮಣಿ, ಮಿತ್ರ, ಖಗ, ಭಗ, ಹರಿದಶ್ವ, ಅರ್ಕ, ಅಂಶುಮಾಲಿ, ಪ್ರಭಾಕರ, ತಪನ, ವಿಕರ್ತನ, ಪ್ರದ್ಯೋತನ, ಪತಂಗ, ಹರಿ, ವಿವಸ್ವಾನ್, ಚಿತ್ರಭಾನು, ಅಹಸ್ಪತಿ, ಸೂರ, ಅರವಿಂದ ಬಂದು, ಸಹಸ್ರಮರೀಚಿಮಾಲಿನಿ, ಬ್ರಧ್ನ, ಹಂಸ, ಅಂಶುಮಾನ್ ತಿಗ್ಮಾಂಶು, ಮಿಹಿರ, ವಿರೋಚನ, ದ್ವಾದಶಾತ್ಮ, ಸವಿತಾರ, ಇತ್ಯಾದಿಯಾಗಿ ಸಂಸ್ಕೃತ ಸಾಹಿತ್ಯದಲ್ಲಿ ನೂರಾರು ಹೆಸರುಗಳ ಜಾ ಲ ಈ ಸೂರ್ಯನಿಗೆ ಹೆಣೆಯಲ್ಪಟ್ಟಿತು. ಇದೇ ಜಾಡನ್ನನುಸರಿಸಿ, ಎಷ್ಟೋ ಹೆಸರು ಗಳನ್ನು ಕನ್ನಡೀಕರಣ ಮಾಡಿ ಕನ್ನಡಿಗರು ಜಗದಿಟ್ಟಿ, ಬೆಂಗದಿರ, ನಿಸಿವಗೆಯ, ತಾವರೆಗೆಳೆಯ, ಪೊಳ್ತು, ನೇಸರು, ಆಗಸವಣಿ, ಪಗಲೆರೆಯ, ಬಿಸುಗದಿರ, ಬೆಂಗದಿರ ಪಲ್ಲಿಲಿ, ಜವನತಂದೆ, ಜಗುನೆಯಯ್ಯ ಇತ್ಯಾದಿಯಾಗಿ ಕರೆದರು.

ಈ ರೀತಿ ಉಪಾಸನಾದೇವತೆಯಾದ ಅವನನ್ನು ಪರಬ್ರಹ್ಮಪದವಾಚ್ಯನನ್ನಾಗಿ ಭಾವಿಸಿ ಉಪಾಸನೆ ಪ್ರಾರಂಭಿಸಿದ ಜನಾಂಗ ಸೌರರೆಂಬ ಹೆಸರು ಪಡೆದರು, ಭಾರ ತದ ಅನೇಕ ಕಡೆಗಳಲ್ಲಿ ಸೂರ್ಯ ದೇವಾಲಯುಗಳು ನಿರ್ಮಾಣಗೊಂಡವು.

ಈಗ ಮುಲ್ತಾನವೆಂದು ಕರೆಯಲ್ಪಡುವ ಊರಿನ ಹೆಸಬು 'ಮೂಲಸ್ಥಾನ' ಎಂದು. ಅದು ಏಳನೆಯ ಶತಮಾನದಲ್ಲಿ ಸೂರ್ಯಾರಾಧಕರ ಕೇಂದ್ರವೆನಿಸಿತ್ತು. ಅಲ್ಲಿ ಒಂದು ಸೂರ್ಯದೇವಾಲಯವಿತ್ತು. ಅಲ್ಲಿಗೆ ಭಾರತದಿಂದ ಅನೇಕ ಜನ ಸೂರ್ಯಾ ರಾಧಕರು ಬರುತ್ತಿದ್ದರು. ಆ ಊರಿನ ಐಶ್ವರ್ಯ ವೃದ್ಧಿಗೆ ಆ ದೇವಾಲಯವೇ ಕಾರಣ ವಾಗಿತ್ತು. ಮಹಮ್ಮದ್ ಇಬನ್ ಅಲ್‌ಕಾಶಿಂ ಇಬನ್ ಅಲ್ ಮನಬ್ಬಿಹ್ ಎಂಬು ವನು ಆ ದೇವಾಲಯವನ್ನು ಹಾಳುಗೆಡವಿದ. ಈ ಮುಲ್ತಾನಿಗೆ ಕಾಶ್ಯಪುರ ಎಂಬ ಹೆಸರೂ ಇತ್ತು. ಸೂರ್ಯನು ಕಶ್ಯಪನ ಮಗನೆಂಬ ಕಾರಣದಿಂದ ಆ ಊರಿಗೆ ಈ ಹೆಸರು.

ಕಾಶ್ಮೀರದ ಶ್ರೀನಗರದ ಬಳಿಯಲ್ಲಿ ಸೂರ್ಯದೇವಾಲಯವೊಂದಿತ್ತು. ಇದೂ ಕೂಡ 7 ನೇ ಶತಮಾನದಲ್ಲಿ ಅಲ್ಲಿ ಆಳುತ್ತಿದ್ದ ಕಾರ್ಕೋಟಕ ವಂಶದ ಅರಸರ ಕಾಲದ್ದಾಗಿದೆ. ಕ್ರಮೇಣ ಅದೂ ಮ್ಲೇಚ್ಛರಿಂದ ಹಾಳಾಯಿತು.

ಪ್ರಪಂಚದ ಪ್ರಖ್ಯಾತವಾದ ಸೂರ್ಯ ದೇವಾಲಯವಿರುವುದು ಒರಿಸ್ಸಾ ರಾಜ್ಯದ ಪೂರಿ ಜಿಲ್ಲೆಯಲ್ಲಿನ ಕೋಣಾರ್ಕ್ಷದಲ್ಲಿ. ಈ ದೇವಾಲಯ ಪೂರಿಯಿಂದ ಈಶಾನ್ಯಕ್ಕೆ



೨೦ ಮೈಲುಗಳ ದೂರದಲ್ಲಿ ಸಮುದ್ರದ ದಂಡೆಯಲ್ಲಿ ಭವ್ಯವಾಗಿ ನಿರ್ಮಾಣಗೊಂಡಿದೆ. ಈ ದೇವಾಲಯವನ್ನು ಗಂಗವಂಶದ ಒಂದನೇ ನರಸಿಂಹನು ಕ್ರಿ. ಶ 1238–1284 ರ ಅವಧಿಯಲ್ಲಿ ಕಟ್ಟಿಸಿದನು. ಈ ದೇವಾಲಯುದ ವಾಸ್ತು ಕ್ರಮವು ವಿಶ್ವದ ಅನೇಕ ಕಲಾವಿಮರ್ಶಕರ ಶ್ಲಾಘನೆಗೆ ಕಾರಣವಾಗಿದೆ. ಇದರ ಶಿಲ್ಪಿ ವಿಷ್ಣುಮಹಾರಾಣಿ 24 ಚಕ್ರಗಳ ಭವ್ಯರಥವೊಂದನ್ನು ಏಳು ಬಲಶಾಲಿ ಅಶ್ವಗಳು ಎಳೆಯುತ್ತಿರುವ ಹಾಗೆ ಪೂರ್ವಾಭಿಮುಖವಾಗಿ ಈ ದೇವಾಲಯವು ನಿರ್ಮಾಣಗೊಂಡಿದೆ. ಸೇವಕರು, ಉಷೆ, ಪ್ರತ್ಯೂಷರೊಡನೆ ಮಂದಹಾಸದಿಂದ ಕಂಗೊಳಿಸುವ ಸಮಭಂಗಿಯಲ್ಲಿ ಸೂರ್ಯಮೂರ್ತಿ ಪ್ರತಿಷ್ಠಿತಗೊಂಡಿದೆ.

ದಕ್ಷಿಣ ಭಾರತದಲ್ಲಿಯೇ ಅಪೂರ್ವವಾದ ಒಂದೇ ಒಂದು ಸೂರ್ಯದೇವಾಲಯವಿರು ವುದು ತಂಜಾವೂರು ಜಿಲ್ಲೆಯಲ್ಲಿನ ಮಯೂರಂ–ಕುಂಭಕೋಣಂಗಳ ಮಧ್ಯದಲ್ಲಿರುವ 'ಅಡುದುರೈ' ರೈಲು ನಿಲ್ದಾಣಕ್ಕೆ ಎರಡು ಕಿಲೋಮೀಟರ್ ದೂರದಲ್ಲಿ ಸೂರ್ಯನಿರುವ ಗರ್ಭಗುಡಿಯ ಸುತ್ತಲೂ ನವಗ್ರಹಗಳ ಪುಟ್ಟ ಗುಡಿಗಳಿವೆ. ದೇಗುಲವು ಪುಟ್ಟದಾಗಿ ದ್ದರೂ ಸುಂದರ ಕಲಾಕೃತಿಯಿಂದ ಕೂಡಿದೆ. ದೇಗುಲದ ಹೊರಭಾಗದಲ್ಲಿ ಸಪ್ತಾಶ್ವಗಳ ಸುಂದರ ಶಿಲಾಮೂರ್ತಿಗಳಿವೆ. ಈ ದೇಗುಲವನ್ನು ಒಂದನೇ ಕುಲೋತ್ತುಂಗ ಚೋಳನು ಕ್ರಿ. ಶ. 1070–1118 ರ ಅವಧಿಯಲ್ಲಿ ಕಟ್ಟಿಸಿದನೆಂದು ಅಲ್ಲಿರುವ ಶಾಸನ ಸಾಹಿತ್ಯ ಸಾರುವುದು. ಮಂದಿರದ ಹೊರ ಭಾಗದಲ್ಲಿರುವ ಕೊಳವನ್ನು ಸೂರ್ಯಪುಷ್ಕರಣಿ ಯೆಂದು ಕರೆಯಲಾಗುತ್ತಿದೆ. ಈ ದೇಗುಲದ ಸೂರ್ಯದೇವನನ್ನು 'ಶಿವಸೂರ್ಯನಾರಾ ಯಣ' ಎಂದು ಕರೆಯುತ್ತಿರುವುದೊಂದು ವೈಶಿಷ್ಟ್ಯವಾಗಿದೆ.

ಹಿಂದೂ ಜನಾಂಗದಲ್ಲಿಯೇ ಸೂರ್ಯಾರಾಧನೆಯ ಪರಂಪರೆ ಬೆಳೆದು ಬಂದಿದೆ ಯೆಂದೇನೂ ಅಲ್ಲ. ಪ್ರಾಚೀನ ಪ್ರಪಂಚದ ಅನೇಕ ಜನಾಂಗಗಳಲ್ಲಿ ಸೂರ್ಯಾ ರಾಧನೆ ಕಂಡು ಬರುತ್ತದೆ. ಮೆಕ್ಸಿಕೊ, ಜಪಾನ್, ಪರ್ಷಿಯಾ ಕೊಲ್ಲಿಯ ಪ್ರದೇಶ ಗಳಲ್ಲಿ ಸೂರ್ಯಾರಾಧನೆ ಪ್ರಚಾರದಲ್ಲಿತ್ತು. ಯಹೂದಿಗಳಲ್ಲೂ ಸೂರ್ಯಾರಾಧನೆ ವ್ಯಾಪಕವಾಗಿತ್ತು. ಕೋಪರ್ನಿಕಸ್ ತತ್ವಜ್ಞಾನಿಯ ಪ್ರಬಂಧಗಳಲ್ಲಿ ಸೂರ್ಯದೇವನ ವಿಚಾರವಾಗಿ ಪೌ ರಾ ಣಿ ಕ ಶೈಲಿಯಲ್ಲಿ ಬರೆಯಲ್ಪಟ್ಟ ಅನೇಕ ಮಾತುಗಳನ್ನು ನೋಡಬಹುದಾಗಿದೆ.

'ಸೂರ್ಯನು ಜ್ಯೋತಿರ್ಮಯವಾದ ಸಿಂಹಾಸನದಲ್ಲಿ ಪ್ರತಿಷ್ಠಿತನಾಗಿ ಸುತ್ತಲೂ ಪರಿಭ್ರಮಿಸುವ ತಾರಾಮಂಡಲಗಳನ್ನು ಆಳುತ್ತಾನೆ. ವಿಶ್ವವೆಂಬ ದೇವಮಂದಿರವನ್ನು ಜ್ಯೋತಿರ್ಮಯವಾಗಿ ಮಾಡುವ ಸಲುವಾಗಿ ಸೂರ್ಯನು ಈ ಮಂದಿರದ ಕೇಂದ್ರದಲ್ಲೇ ವಿರಾಜಮಾನನಾಗಿದ್ದಾನೆ. ಜಗತ್ತಿಗೆ ಅನ್ನದಾಯಕವಾದ ವೃಷ್ಟಿಗೆ ಕಾರಣ, ದ್ಯಾವಾ ಪೃಥ್ವಿಗಳ ದಾಂಪತ್ಯ ಮತ್ತು ಸೂರ್ಯದೇವನ ಅನುಗ್ರಹ–ಇಂತಹ ವರ್ಣನೆಗಳು ಕೋಪ

ರ್ನಿಕಸನ ಕೃತಿಗಳಲ್ಲಿ ಹೇರಳವಾಗಿ ದೊರಕುತ್ತವೆ. ಅವನ ಈ ಕೆಳಗಿನ ಮಾತುಗಳನ್ನು ನೋಡಿ :—

"In the middle of all Dwells the Sun, who indeed–in this most beautiful temple would place the torch in any other or better place than one whence it can illuminate the whole at the same time and thus, Rightly in as much as the sun. Sitting on a throne, Governs the Circumambient family of stars ....We find, therefore, under this orderly arrangement, a wonderful symmetry in the univerese, and a definite relation of harmony in the motion and Magnitude of orbs of a kind it is not possible to obtain in any other way".

ಹೀಗೆ ಸೂರ್ಯ, ಆತನ ಅದ್ಭುತಶಕ್ತಿ, ಜಗದ ಸಮಸ್ತ ಕ್ರಿಯೆಗಳಿಗೆ ಪ್ರೇರಕವಾದ ಮಹಾಶಕ್ತಿಯಾಗಿ ಬಿಡಿಸಲಾಗದ ಕಗ್ಗಂಟಿನಂತಿರುವ ಆತನ ಬಗೆಗೆ ಎತ್ತಿ ಕೈಮುಗಿಯುತ್ತಲೇ ಜಗದ ಜನ ಎಂದಿನಿಂದ ಆರಾಧಿಸಿಕೊಂಡು ಬರುತ್ತಿದೆ.

ಉತ್ತರಾಯಣ ಪುಣ್ಯಕಾಲವಂತೂ ಸೂರ್ಯನಿಗೆ ಮೀಸಲಾದ ಋತುಮಾನ ಬದಲಾವಣೆಯ ಸಮಯದ ಒಂದು ಪ್ರಮುಖ ಹಬ್ಬವಾಗಿ ಎಂದಿನಿಂದಲೂ ಹಿಂದೂ ಜನಾಂಗ ಆಚರಿಸಿಕೊಂಡು ಬರುತ್ತಿದೆ ಎಂಬುದಂತೂ ಸತ್ಯ. ಹಿಂದೂ ಜನಾಂಗವು ಕಲ್ಪಿಸಿಕೊಂಡಿರುವ ಹಬ್ಬ ಹರಿದಿನಗಳು ಜನಾಂಗದ ಐಕ್ಯ, ಆಹಾರ ಬದಲಾವಣೆ, ಆರೋಗ್ಯನಿಯಮಪಾಲನೆ, ಉಡುಪುಗಳ ನವೀಕರಣೆ, ಬಂಧು ಬಾಂಧವ ಸ್ನೇಹ ಸಂಬಂಧ, ಈಶ್ವರ ನಿರ್ಮಿತ ಪ್ರಾಕೃತಿಕ ಭೌಗೋಳಿಕ ಸಂಪದದೊಡನೆ ಸ್ವರಮೇಳ ಗೊಳ್ಳುವಿಕೆಯೇ ಮುಂತಾದ ಐಹಿಕಸುಖಸಾಧನೆಗಳಿಗೆ ಕಾರಣಗಳಾದರೆ, ಮತ್ತೊಂದು ನಿಟ್ಟಿನಲ್ಲಿ ಧಾರ್ಮಿಕ ಶಾಂತಿ, ಮೋಕ್ಷ ಕಲ್ಪನೆಯೇ ಮೊದಲಾದ ಆಮುಷ್ಮಿಕ ಸುಖದ ಅನ್ವೇಷಣೆಗೂ ಕಾರಣಗಳಾಗಿವೆಯೆನ್ನಬಹುದು.

ಕಾಲಮಾನ, ಋತುಮಾನ, ಉದ್ಯೋಗ, ವ್ಯವಸಾಯ, ದೇವತೆಗಳು, ಪಿತೃಗಳು, ಪುರಾಣೋಕ್ತಪ್ರಸಿದ್ಧ ಮ ಹಾ ಪು ರು ಷ ರು, ಐತಿಹಾಸಿಕಭೂತಿಪುರುಷರು, ಮುಂತಾದವರನ್ನು ಕುರಿತು ಆಚರಿಸುವ ವರ್ಷಗಳೆನ್ನಬಹುದು. ಈ ಪರ್ವಗಳನ್ನು ಆಚರಿಸುವ ದಿನಗಳು, ವಿಧಾನ, ಫಲಗಳ ವಿಷಯದಲ್ಲಿ ಭಾರತೀಯ ಸಾಹಿತ್ಯದಲ್ಲಿ ವಿಪುಲಗ್ರಂಥರಾಶಿ ಮೈದಳೆದಿದ್ದರೂ ಕಾಲಕಾಲಕ್ಕೆ ಬೆಳೆದುಬಂದ ಈ ಸಾಹಿತ್ಯರಾಶಿಯಲ್ಲಿ



ಎಷ್ಟೋ ಅವೈಜ್ಞಾನಿಕ ಮೂಢಕಲ್ಪನೆಗಳೂ ತಲೆದೋರಿರಬಹುದು. ಆದರೆ ಸಾಮಾಜಿಕ ಶಾಂತಿ, ಧಾರ್ಮಿಕಶುದ್ಧಿ, ಸಾಂಸ್ಕೃತಿಕ ಅಭಿವೃದ್ಧಿ ಕಾರಣಗಳಿಂದ ತತ್ತ್ವಬದ್ಧವಾಗಿ ಒಪ್ಪಬಹುದಾದ ಅಭಿಪ್ರಾಯಗಳನ್ನು ಸ್ವೀಕರಿಸಿ ಈ ಹಬ್ಬಗಳನ್ನು ಆಚರಿಸುವಲ್ಲಿ ಹಿಂದೂ ಸಂಸ್ಕೃತಿಯ ತರ್ಕಬದ್ಧವಾದ ವಿಚಾರಧಾರೆಯ ಅಂಶಗಳು ಗೋಚರಿಸದಿರಲಾರವು. ಕಾರ್ತಿಕಮಾಸದಲ್ಲಿ ದೀಪಾವಳಿಯನ್ನು ಮೂರು ದಿನ ಆಚರಿಸಿದಮೇಲೆ ಪುಷ್ಯಮಾಸದಲ್ಲಿ ಬರುವ ಉತ್ತರಾಯಣ ಪುಣ್ಯಕಾಲವೇ ಭಾರತೀಯರ ಪ್ರಮುಖವಾದ ಪರ್ವದಿನ. ಈ ದಿನ ಮುಂಗಾರಿನ ಹೊಸ ಧಾನ್ಯಗಳು ಕೈಗೆ ಬಂದ ಸುಗ್ಗಿಯ ಸೊಗಸಿನ ಮೊದಲ ಪರ್ವದ ದಿನ. ಸೂರ್ಯತೇಜ ಪ್ರಬಲಗೊಳ್ಳುವ ಪ್ರಥಮ ದಿನ.

ಉತ್ತರಾಯಣ ಪುಣ್ಯಕಾಲವು ಸೂರ್ಯನು ಮಕರ ರಾಶಿಯ ಪ್ರವೇಶದಿಂದ ಒದಗಿ ಬರುವ ಕಾರಣ ಇದಕ್ಕೆ 'ಮಕರಸಂಕ್ರಮಣಪುಣ್ಯಕಾಲವೆಂದೂ ಕರೆದಿದ್ದಾರೆ. ಈ ಹಬ್ಬದ ಆಚರಣೆಯಲ್ಲಿ ಎಳ್ಳು-ಬೆಲ್ಲ-ಕಬ್ಬು-ಎಲಚಿ ಅಂದರೆ ಬೋರೆಹಣ್ಣುಗಳಿಗೆ ಎಲ್ಲಿಲ್ಲದ ಪ್ರಾಶಸ್ತ್ಯ. ಹೊಸ ಎಳ್ಳು, ಹೊಸ ಬೆಲ್ಲ ಬಲಿತಕಬ್ಬು, ಮಾಗಿದ ಎಲಚಿ— ಒಂದೊಂದು ಆಹಾರವಸ್ತುವಿನಲ್ಲೂ ಒಂದೊಂದು ರೀತಿಯ ದೇಹ ಪೋಷಕ ವಸ್ತುಗಳು ಕೂಡಿರುವುದರಿಂದ ಇವುಗಳನ್ನು–ಪ್ರಸಾದವಾಗಿ ಸ್ವೀಕರಿಸಬೇಕೆಂಬ ಕಟ್ಟಳೆ ಇಲ್ಲಿದೆ. ಭಾರತೀಯರು ಯಾವ ಹೊಸಬೆಳಸನ್ನೂ ದೇವರಿಗೆ ಅರ್ಪಿಸುವುದರ ಮೂಲಕವೇ ಅನಂತರಪ್ರಸಾದವೆಂದು ಸ್ವೀಕರಿಸುತ್ತಾರೆ. ಏಕೆಂದರೆ ಇವೆಲ್ಲ ಪರಮಾತ್ಮನ ಪ್ರಸಾದ ರೂಪವಾಗಿ ನಮಗೆ ಲಭ್ಯವಾಗಿವೆ, ಎಂಬುದೇ ಇವರ ನಂಬುಗೆ.

ಮಕರ ಸಂಕ್ರಮಣ ಬರುವುದು ಪ್ರತಿ ವರ್ಷ ಜನವರಿ 13 ಅಥವಾ 14ನೆಯ ತಾರೀಖುಗಳಂದು. ಸೌರಮಾನದರೀತ್ಯಾ ಈ ದಿನವನ್ನು ಪರಿಗಣಿಸುವುದರಿಂದ ಪುಷ್ಯ ಮಾಸದ ತಿಥಿಗಳಲ್ಲಿ ಸ್ವಲ್ಪ ಹೆಚ್ಚುಕಡಿಮೆಯಾಗುತ್ತಿದ್ದರೂ ಇದು ಬರುವುದು ಪುಷ್ಯ ಮಾಸದಲ್ಲಿಯೇ. ಪುಷ್ಯಮಾಸ ಬರುತ್ತಲೇ ಸುಗ್ಗಿಪ್ರಾರಂಭ. ಸುಗ್ಗಿಯ ಸೊಬಗಿನ ಹಿಗ್ಗಿನಲ್ಲಿ ಹಿಂದೂಗಳು ಮೈಮರೆತು ಈ ಹಬ್ಬ ಆಚರಿಸುವುದಕ್ಕೆ ಇದೂ ಕಾರಣ. ಕಬ್ಬು ಪೂರ್ಣಬಲಿತು ತಿನ್ನಲು, ಆಲೆಯಾಡಲು ಯೋಗ್ಯವಾಗುವುದು, ಪುಷ್ಯಮಾಸ ದಲ್ಲಿಯೇ. ಎಳ್ಳು ಒಕ್ಕಲು ಮಾಡುವುದು ಈಗಲೇ, ಎಲಚಿಹಣ್ಣಾಗಿ ತಿನ್ನಲು ಯೋಗ್ಯವಾಗುವುದೂ ಈಗಲೇ. ಹಿಂದೆ ಶ್ರೀರಾಮನಿಗೆ ಶಬರಿ ಕೊಟ್ಟ ಎಂಜಲು ಹಣ್ಣು ಎಲಚಿಯೇ. ವ್ಯವಸಾಯ ಲೋಕದಲ್ಲಿ ಜೋಳ-ಬತ್ತಗಳ ಒಕ್ಕಲನ್ನು ಮಕರ ಸಂಕ್ರಮಣದ ನಂತರವೇ ಮಾಡಬೇಕೆಂಬ ನಿಯಮ ಹಿಂದಿನ ಕಾಲದಲ್ಲಿತ್ತು. ಮಕರ ಸಂಕ್ರಮಣಕ್ಕೆ ಮೊದಲು ಒಕ್ಕಲು ಮಾಡಿದರೆ ಹುಲುಸಲ್ಲವೆಂದೂ, ಈಡಾಗುವುದಿಲ್ಲ ವೆಂದೂ ವ್ಯವಸಾಯಗಾರರ ನಂಬುಗೆಯಾಗಿತ್ತು. ಈ ನಿಯಮವನ್ನು ಕೆಲವರು ಪಾಲಿಸ ದಿರಬಹುದು. ಬೆಳೆ ಹುಲುಸಾಗುವುದು, ಹೊಸ ಕಾಳು ರುಚಿಗಟ್ಟುವುದು. ಸ್ವಲ್ಪ

ಮುಗ್ಗಿದ ನಂತರವೇ ಎಂಬುದು ಎಲ್ಲರ ಅನುಭವ. ಹೊಸ ಜೋಳ ಹೊಸ ಅಕ್ಕಿ ಹೊಟ್ಟೆಗೆ ಹಿತವಲ್ಲ ಎಂಬುದನ್ನು ಸಾಮಾನ್ಯವಾಗಿ ಎಲ್ಲರೂ ತಿಳಿದಿರುವ ಅಂಶ.

ಇದೇನೇ ಇರಲಿ ಮಕರ ಸಂಕ್ರಮಣದಲ್ಲಿ ಎಳ್ಳಿಗೆ ಪ್ರಥಮ ಪ್ರಾಶಸ್ತ್ಯ ; ಅನಂತರ ಬೆಲ್ಲಕ್ಕೆ. "ಎಳ್ಳುಬೆಲ್ಲ ತಿಂದು ಒಳ್ಳೊಳ್ಳೆ ಮಾತಾಡು" ಎಂಬುದೇ ಈ ಹಬ್ಬದ ಸೂಕ್ತಿ. ಒಳ್ಳೆಯ ಮಾತುಗಳಿಂದ ಜೀವನದಲ್ಲಿ ಉಂಟಾಗುವ ಲಾಭದಬಗೆಗೆ ಮನುಷ್ಯನಿಗೆ ಈ ಹಬ್ಬ ಎಚ್ಚರಿಸುತ್ತದೆ. ಎಳ್ಳುಬೆಲ್ಲವನ್ನು ಬಂಧುಬಾಂಧವರಿಗೆಲ್ಲ ಬೀರುತ್ತ, ಒಳ್ಳೊಳ್ಳೆ ಮಾತನಾಡಿ ಬಾಂಧವ್ಯದಲ್ಲಿ ನಿತ್ಯನೂತನತೆಯನ್ನು ಉಳಿಸಿಕೊಳ್ಳುವುದು ಎಲ್ಲೆಲ್ಲೂ ಕಂಡುಬರುತ್ತದೆ. ಒಳ್ಳೆಯ ಮಾತು ಸಮಾಜದಲ್ಲಿ ನಿತ್ಯನೂತನತೆಯನ್ನು ಉಳಿಸಿಕೊಳ್ಳುವುದು. ವಿಶ್ವಾಸವನ್ನು ಬೆಳೆಸಿಕೊಳ್ಳುವುದು, ಒಳ್ಳೆಯ ಮಾತುಗಳು ಸಮಾಜದಲ್ಲಿ ಸತ್ಪರಿಣಾಮ ಬೀರಬಲ್ಲದು. "ಅಯ್ಯಾ ಎಂದರೆ ಸ್ವರ್ಗ ಎಲವೋ ಎಂದರೇ ನರಕ" ಎಂಬ ಬಸವಣ್ಣನ ಮಾತನ್ನಿಲ್ಲಿ ಸ್ಮರಿಸಿಕೊಳ್ಳಬಹುದು. ಅಯ್ಯಾ ಜೀಯಾ ಎಂಬ ಮಾತುಗಳು ಏರಿದ ಮನುಷ್ಯನವು ; ಎಲವೊ ಎಂಬ ಮಾತು ಇಳಿದ ಮನುಷ್ಯನವು. ಮೃದು ವಚನ ಸಕಲ ಜಪ. ಮೃದುವಚನ ಸಕಲತಪ, ಈ ಎಚ್ಚರಿಕೆ ಮಕರಸಂಕ್ರಾಂತಿಯ ಎಚ್ಚರಿಕೆಯಲ್ಲದೆ ಮತ್ತೇನು ?

ನುಡಿದರೆ ಮುತ್ತಿನ ಹಾರದಂತಿರಬೇಕು ; ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು ; ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು ;
ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವನೆಂತೊಲಿವನಯ್ಯಾ"

ಸಮಾಜ ಸಂಸ್ಕೃತಿಯೊಡನೆ ಸುಸಂಸ್ಕೃತನಾಗಿ ಒಡವೆರೆದು ಜೀವಿಸುವುದೇ ಧರ್ಮದ ಮುಖ್ಯ ಸಂದೇಶ. ಧರ್ಮವು ವ್ಯಕ್ತಿ ವ್ಯಕ್ತಿಗಳ ಮಧುರ ಬಾಂಧವ್ಯವನ್ನು ಕುದುರಿಸಿ ಕೂಡಿ ಬಾಳುವಂತೆ ಮಾಡುವುದು. ಇದೇ ಸಂಕ್ರಮಣ ಪುಣ್ಯಕಾಲದ ಅಮರ ಸಂದೇಶ. ಒಡೆದು ಬಾಳುವುದು ಧರ್ಮದ ಲಕ್ಷಣವಲ್ಲ. "ಯತೋ ಅಭ್ಯುದಯ ನಿಶ್ಶ್ರೇಯಸಸ್ಸಿದ್ಧಿಃ ಸಧರ್ಮಃ" ಎಂಬುದು ಧರ್ಮಪದದ ಸೂತ್ರ.

ಎಳ್ಳು ಉತ್ತರಾಯಣ ಪುಣ್ಯಕಾಲದಲ್ಲಿ ಬಳಸಲ್ಪಡುವ ಅತಿಮುಖ್ಯ ಧಾನ್ಯವಿಶೇಷವೆಂದು ಹಿಂದೆ ತಿಳಿಸಿದೆ. ಎಳ್ಳಿನ ದಾನ, ಎಳ್ಳನ್ನು ತಲೆಯ ಮೇಲಿಕ್ಕಿ ಸ್ನಾನ ಮಾಡುವುದು, ಮಕ್ಕಳನ್ನು ಹಸೆಯ ಮೇಲೆ ಕುಳ್ಳಿರಿಸಿ ಎಳ್ಳು ಸುರಿಯುವಿಕೆ, ಎಳ್ಳಿನ ಎಣ್ಣೆಯ ದೀಪಮುಡಿಸುವಿಕೆ, ಎಳ್ಳಿನ ಎಣ್ಣೆ ಪೂಸಿಕೊಂಡು ಸ್ನಾನಮಾಡುವಿಕೆ, ಬೆಲ್ಲದೊಡನೆ ಅದನ್ನು ತಿನ್ನುವಿಕೆ ಹೀಗೆ ಎಲ್ಲೆಲ್ಲೂ ಎಳ್ಳಿನ ಪ್ರತಾಪವೇ ಪ್ರತಾಪ ಈ ಹಬ್ಬದಲ್ಲಿ. ಕಾರಣ ಎಳ್ಳು ಅನೇಕ ಪೌಷ್ಟಿಕಾಂಶಗಳನ್ನು ಹೊಂದಿರುವ ಬಹುರುಚಿಕರವಾದ



ಧಾನ್ಯವಿಶೇಷ. ಅಲ್ಲದೆ ಔಷಧಿಯೂ ಹೌದು, ಕೆಲವು ರೋಗಗಳನ್ನು ತಡೆಗಟ್ಟುವ ಶಕ್ತಿ ಈ ಎಣ್ಣೆಗಿದೆ ಎಂದು ಹೇಳಲಾಗುತ್ತಿದೆ. ಶೈತ್ಯದ ಉಪಶಮನಕ್ಕೆ ಎಳ್ಳು ಕೂಡ ಒಂದು ಸಾಧಕವಾದ ಆಹಾರ. ಹೋಮದಲ್ಲಿ ಹಾಕುವ ಎಳ್ಳಿನ ಧೂಮದಲ್ಲಿ ಕ್ರಿಮಿ ನಾಶಕ ಶಕ್ತಿಯಿದೆ ಎನ್ನುವರು. ದೀಪಕ್ಕೆ, ಅಭ್ಯಂಜನ ಸ್ನಾನಕ್ಕೆ, ತರ್ಪಣಕ್ಕೆ, ತಿಂಡಿ ತೀರ್ಥಗಳಿಗೆ ನಮ್ಮ ಪ್ರಾಚೀನರು ಎಳ್ಳನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದರು.

ಚಾವುಂಡರಾಯನ 'ಲೋಕೋಪಕಾರ' ಗ್ರಂಥದಲ್ಲಿ ನೂರಾರು ಔಷಧಗಳಿಗೆ ಎಳ್ಳು ಮತ್ತು ಎಳ್ಳೆಣ್ಣೆಯ ಪ್ರಯೋಗವನ್ನು ಹೇಳಲಾಗಿದೆ. ಅಪ್ಪಟ ಎಳ್ಳೆಣ್ಣೆ ಪೌಷ್ಟಿಕ ಖಾದ್ಯತೈಲ. ವಿಜಯನಗರದ ಕೃಷ್ಣದೇವರಾಯನು ಎಳ್ಳೆಣ್ಣೆಯನ್ನು ಮೈಗೆ ಚೆನ್ನಾಗಿ ತಿಕ್ಕಿಕೊಂಡು ವ್ಯಾಯಾಮ ಮಾಡಿ, ಆಮೇಲೆ ಸ್ನಾನ ಮಾಡುತ್ತಿದ್ದನೆಂದು ತಿಳಿದು ಬರುವುದು. ಎಳ್ಳಿನ ಬಳಕೆಯು ಕೇವಲ ಹಿಂದೂಗಳ ಧಾರ್ಮಿಕ ಬಳಕೆಯಲ್ಲಷ್ಟೇ ಅಲ್ಲ, ಪ್ರಾಚೀನ ಗ್ರೀಕರು, ರೋಮನ್ನರು ಕೂಡ ಕೆಲವು ಧಾರ್ಮಿಕ ಬಳಕೆಯಲ್ಲಿ ಎಳ್ಳನ್ನು ಬಳಸುತ್ತಿದ್ದರೆಂದು ತಿಳಿದುಬರುತ್ತದೆ.

ಏನೇ ಇರಲಿ ಭಾರತ ಮಟ್ಟದಲ್ಲಿ ಎಳ್ಳನ್ನು ಮಿಕ್ಕಿಸುವ ಇನ್ನೊಂದು ಧಾನ್ಯ ಹುಟ್ಟಲಿಲ್ಲವೆಂದು ತೋರುತ್ತದೆ. ಕೆಲವು ದೇವರಿಗೆ ಎಳ್ಳಿನ ಚಿಗಳಯಿಲ್ಲದಿದ್ದರೆ ಯಾವ ವರವನ್ನೂ ಕೊಡವು. ಕನ್ನಡನಾಡಿನ ಸುಪ್ರಸಿದ್ಧ ಸಿಹಿತಿಂಡಿಯಾದ ಕರಜಿಕಾಯಿಗೆ ಎಳ್ಳು ಬೇಕೇಬೇಕು. ಚಕ್ಕುಲಿಗೆ ಎಳ್ಳು ಬೀಳದಿದ್ದರೆ ರುಚಿಯಾಗದು. ಎಳ್ಳು ಹಚ್ಚಿದ ಸಜ್ಜೆರೊಟ್ಟಿಗೆ ಎಳ್ಳುಪುಡಿ ಹಾಕಿ ಮಾಡಿದ ಬದನೇಕಾಯಿ ಇಡಿಕಾಯಿಪಲ್ಯ ಎಳ್ಳಿನ ಕರಂಡಿ, ಕೆನೆಮೊಸರು ಇಷ್ಟು ಸೇರಿದಾಗ ಜಿಹ್ವಾಚಾಪಲ್ಯವೇ ಕೆರಳಿಬಿಡುವುದು. ಆದರೆ ತಿನ್ನುವವನ ಜಠರದಲ್ಲಿ ಸಾಕಷ್ಟು ಜೀರಕ ರಸವಿರಬೇಕು ಮಾತ್ರ. ಎಳ್ಳಿನೆಣ್ಣೆಯಲ್ಲಿ ಮಾಡಿದ ಒಗ್ಗರಣೆಯ ರುಚಿ ಇನ್ನಾವುದಕ್ಕೆ ಬಂದಿತು ? ಎಣ್ಣೆ ಎಂಬ ಶಬ್ದ ಹುಟ್ಟಿರುವುದೇ ಎಳ್-ನೆಯ್ ಎಂಬುದರಿಂದ. ಎಳ್ಳಿನ ನೆಯ್ ಅಂದರೆ ಸ್ನಿಗ್ಧ ಪದಾರ್ಥವೇ ಎಳ್‌ನೆಯ್, ಎಳ್‌ನೆ-ಎಣ್ಣೆ ಆಗಿ ಈಗ ಪ್ರಚಲಿತವಿರುವ ಎಣ್ಣೆಗಳಿಗೆಲ್ಲ ಮಾತೃಸ್ವರೂಪವಾಗಿದೆ ಈಗ. ಎಳ್‌ನೆಯ್ ಸ್ಥಾನವನ್ನು ಕಡಲೆಕಾಯಿರಸ ಆಕ್ರಮಿಸಿ ಕಡಲೆಕಾಯಿ ಎಣ್ಣೆ ಆಗಿದೆ. ಇದರಂತೆ ಕೊಬ್ರಿ ಎಣ್ಣೆ, ಹರಳೆಣ್ಣೆ, ಹೊಂಗೆಎಣ್ಣೆ-ಎಣ್ಣೆ ಎಣ್ಣೆ ಎಣ್ಣೆಗಳ ಈ ಅವಾಂತರದಲ್ಲಿ ಎಳನೆಯ್ ಎಲ್ಲೊ ಮೂಲೆಗೆ ಸೇರಿ ಹೋಗಿದೆ. ಕಾಲಾಯತಸ್ಮೈ ನಮಃ .

ಕನ್ನಡದಲ್ಲಷ್ಟೇ ಅಲ್ಲ, ಸಂಸ್ಕೃತದಲ್ಲೂ ಎಳ್ಳಿಗೇ ಪ್ರಾಶಸ್ತ್ಯ, ಸಂಸ್ಕೃತದಲ್ಲಿ ಎಳ್ಳಿಗೆ 'ತಿಲ' ಎಂದು ಹೆಸರು. ತಿಲಸಂಬಂಧದ ರಸವೇ 'ತೈಲ'. ಅಲ್ಲಿಯೂ ಎಲ್ಲ ಧಾನ್ಯ ರಸಗಳಿಗೂ ತೈಲವೆಂಬ ಹೆಸರೇ ಬಂದು ಹೋಗಿದೆ. ಭೃಂಗಾಮಲಕ ತೈಲ, ಸುಗಂಧ ತೈಲ, ಬ್ರಾಹ್ಮೀತೈಲ, – ಇತ್ಯಾದಿ-ಇತ್ಯಾದಿ. ಸ್ವಲ್ಪ ಬದಲಾವಣೆಯೊಂದಿಗೆ ಹಿಂದೀ

ಉರ್ದು ಇತ್ಯಾದಿ ಭಾಷೆಗಳಲ್ಲಿ ತೇಲ್‌ಆಗಿಹೋಯಿತು. ಏನೇ ಆದರೂ 'ತಿಲ' ದ ಹೆಸರಿನ ಮೇಲೆ ತೆರೆಯೆಳೆಯಲು ಯಾವುದೂ ಸಮರ್ಥವಾಗಲಿಲ್ಲ.

ಸಾಹಿತ್ಯಲೋಕದಲ್ಲಿ ಎಳ್ಳಿನ ರೂಪಕ, ಉಪಮಾನಗಳಿಗೆ ಲೆಕ್ಕವಿಲ್ಲ. ಪರಮಾತ್ಮನ ನಿಲವನ್ನು ಸೂಚಿಸುವಲ್ಲಿ ಮಹಾದೇವಿಯಕ್ಕ ತಿಲದಮರೆಯ ತೈಲದಂತೆ, ಭಾವದ ಮರೆಯಲ್ಲಿ ಬ್ರಹ್ಮನಿದ್ದಾನೆನ್ನುತ್ತಾಳೆ. 'ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತೆ ಆಯಿತ್ತೆನ್ನ ಭಕ್ತಿ' ಎನ್ನುತ್ತಾರೆ ಬಸವಣ್ಣನವರು. ತಿಲದಮರಯ ತೈಲವನರೆದು ಕಾಂಬ ತೆರನಂತೆ ಎಂದಿದ್ದಾರೆ ಮೋಳಿಗೆಮಾರಯ್ಯ ಶರಣರು. ಪ್ರಭುದೇವರು ಎಳ್ಳಿಂಗೆ ಪರಿಮಳವೇಧಿಸಿದಲ್ಲದೆ ಎಣ್ಣೆಗೆ ಪರಿಮಳಬಾರದು' ಎನ್ನುತ್ತಾರೆ.

ಜಾನಪದ ಸಾಹಿತ್ಯದಲ್ಲಂತೂ ಎಳ್ಳಿನ ಘನತೆಗೌರವಗಳು ಮುಗಿಲೆತ್ತರಕ್ಕೇರಿವೆ,
ಎಳ್ಳು ಹೂವಿನ ಸೀರಿ । ಬೆಳ್ಳಿಕಾಲನಂಗುರ,
ಹಳ್ಳದ ನೀರು ತರುತಾಳೆ । ಹಳ್ಳದ ನೀರು ತರುತಾಳೆ । ನನ್ನ ಗೆಳತಿ,
ಹಳ್ಳಿ ಗೌಡರ ಹಿರಿಮಗಳು ॥

ಎಳ್ಳು ಹೂವಿನ ಸೀರಿ ಕೊರಳಾಗ ಚಿಂತಾಕು ।
ಇರುಳು ಬಂದೆತ್ತು ಇಳಿದಾಳು । ಇರುಳು ಬಂದೆತ್ತು ಇಳಿದಾಳ ನನಗೆಳತಿ ।
ಅರಳೆಲೆ ಮಗನ ಹೆಸರೇನೆ ।

ಎಳ್ಳು ಬೆಳಿಯೋನಾಡು । ಸಣ್ಣೂರಿಗೆ ಒಳನಾಡು ।
ಎಳ್ಳು ಬೆಳೆಯೋದು ಕನಕಗಿರಿ । ಎಳ್ಳು ಬೆಳೆವಂತ ಕನಕಗಿರಿ । ರಾಜ್ಯವ
ಮತ್ತೆ ಸೋತಾನ ದೊರೆಯ ಮಗ ।

ಏಳುತಲೆ ನಾನೆದ್ದು ಯಾರ್‍ಯಾರ ನೆನೆದೇನು !
ಎಳ್ಳು ಜೀರಿಗೆ ಬೆಳೆವಂಥ ! ಎಳ್ಳು ಜೀರಿಗೆ ಬೆಳೆಯೊಳ ಭೂಮಿತಾಯ !
ಎದ್ದೊಂದುಗಳಿಗಿ ನೆನೆದೇನು ॥

—ಹೀಗೆ ನೂರಾರು ಸಾವಿರಾರು ಪದ್ಯಗಳಲ್ಲಿ ವಚನಗಳಲ್ಲಿ ಎಳ್ಳಿನ ಮಹತ್ತು ಬೃಹತ್ತುಗಳು ಪ್ರಕಟವಾಗಿರುವುದು ಕಂಡುಬರುವುದು. ಗಾದೆಗಳಲ್ಲಿ ಪಡಿ ನುಡಿಗಳಲ್ಲಿ ಮೈಮೇಲಿನ ಗುರುತು ಚಿಹ್ನೆಗಳನ್ನು ಹೇಳುವಲ್ಲಿ ಎಳ್ಳಿನ ಹೋಲಿಕೆಗೆ ಮಿತಿಯಿಲ್ಲ. ದೃಷ್ಟಾಂತಕ್ಕೆ ಕೊನೆಯಿಲ್ಲ.

" ಎಳ್ಳು ಒಣಗಿದರೆ ಎಣ್ಣೆ ಬಂತು—ನೀ ಒಣಗಿ ದರೇನು ಬಂತು "
" ಎಳ್ಳು ಕಿತ್ತು ಹುಳ್ಳಿ ಹಾಕಿದವನಂತೆ, "



' ಎಳ್ಳಿನೊಳಗೆ ಇಲ್ಲವೇ ಎಣ್ಣೆ ' "ಎಳ್ಳು ಹಾಕಿದರೆ ಸಿಡಿಯುವಂಥ ಜ್ವರ" ಎನ್ನುತ್ತಾರೆ. ಮಾತನಾಡುವಾಗ ಪರಮಾತ್ಮನು ಎಲ್ಲೆಲ್ಲೂ ಇದ್ದಾನೆನ್ನುವುದನ್ನು " ಎಳ್ಳು ಕಾಳು ಮುಳ್ಳುಮೊನೆ " ಎಂಬಮಾತು ಬಳಸುತ್ತಾರೆ. ಏನಾದರೂ ತನ್ನಲಿಲ್ಲವೆನ್ನುವಾಗ ' ಎಳ್ಳಷ್ಟೂ ಇಲ್ಲ ' ' ಎಳ್ಳನಿತಿಲ್ಲ ' ಎನ್ನುತ್ತಾರೆ. ಸಂಸ್ಕೃತದಲ್ಲಿ ಇದನ್ನೇ ತಿಲಪ್ರಾಯ ತಿಲಮಾತ್ರ, ತಿಲವತ್, ತಿಲೋಪಮ, ತಿಲಸದೃಶ ಇತ್ಯಾದಿ ಇತ್ಯಾದಿ ಹೇಳುತ್ತಾರೆ.

ಹಣೆಯ ಮೇಲೆ ತಿಲದ ಆಕಾರದಲ್ಲಿ ಚುಕ್ಕೆ ಇಟ್ಟುಕೊಳ್ಳುವುದಕ್ಕೆ ' ತಿಲಕ ' ಎನ್ನುವರು. ಇದರ ಸಂಕೇತವಾಗಿಯೇ ಶ್ರೇಷ್ಠತೆಯನ್ನು ಹೇಳುವಲ್ಲಿ ತಿಲಕಪ್ರಾಯ, ತಿಲಕಸದೃಶ, ಮಂತ್ರಿತಿಲಕ, ಯತಿಕುಲತಿಲಕ, ಇತ್ಯಾದಿಯಾಗಿ ಹೇಳುವರು. ತೆನ್ನಾಲಿ ರಾಮಕೃಷ್ಣನು ತನ್ನೊಡನೆವಾದಿಸಬಂದ ಪ್ರತಿವಾದಿ ಭಯಂಕರನಿಗೆ ತನ್ನಬಗಲೊಳಗಿನ ಗಂಟನ್ನು ಕುರಿತು " ತಿಲಕಾಷ್ಠಮಹಿಷಬಂಧನ ಗ್ರಂಥ " ವೆಂದನಂತೆ ಅದನ್ನು ಕೇಳಿಯೇ ಪ್ರತಿವಾದಿ ಬೆಪ್ಪಾಗಿ ಹೊದನಂತೆ ದೇಹದ ಮೇಲಿನ ಕಪ್ಪು ಚುಕ್ಕೆಯನ್ನು ' ತಿಲಕಾಲಿಕ ' ಎಂದು ಕರೆದರು.

ಲಾಕ್ಷಣಿಕರು ಮಿಶ್ರಾಲಂಕಾರ ಹೇಳುವಾಗ ತಿಲತಂಡುಲವತ್ ಸಂಸೃಷ್ಟಿಃ ಎನ್ನುತ್ತಾರೆ. ಷೋಡಶದಾನಗಳಲ್ಲಿ ಗೋ-ಭೂಮಿಗಳನಂತರ " ತಿಲ " ವೇ ಮೂರನೆಯ ವಸ್ತು, ದಶಧಾನ್ಯಗಳಲ್ಲಿ ತಿಲವೇ ಮೊದಲನೆಯದು ಎಳ್ಳು ಬೆಳೆವ ಹೊಲಕ್ಕೆ ತೈಲೀನವೆಂದು ಹೆಸರು. ತೈಲಿಕ ಎಂದರೆ ಎಳ್ಳುಹಿಂಡಿ, ತೈಲಿಗ ಎಂದರೆ ಎಳ್ಳಿನ ಎಣ್ಣೆ ತೆಗೆಯುವವ. ಹೀಗೆ ಎಳ್ಳು ಎಳ್ಳಿನ ಪದಾರ್ಥಗಳು ಜೀವನದಲ್ಲಿ ಹಾಸುಹೊಕ್ಕಾಗಿ ಮಹತ್ವದ ಸ್ಥಾನವನ್ನಾಕ್ರಮಿಸಿರುವುದು ಅತ್ಯಂತ ಕುತೂಹಲಕಾರಿ ಅಂಶ, ಯಾವ ಧಾನ್ಯಕ್ಕೂ ಇಲ್ಲದ ಪ್ರಾಶಸ್ತ್ಯ ಭಾರತೀಯ ಸಾಹಿತ್ಯದಲ್ಲಿ ಜನಜೀವನದಲ್ಲಿ ಎಳ್ಳಿಗೆ ಕಂಡುಬರುತ್ತದೆ. ಸಂಸ್ಕೃತಪ್ರಿಯರಾದ ಅನೇಕ ವೃದ್ಧ ಪಿತಾಮಹರು ಅದರ ಸಂಬಂಧದ ವಸ್ತುಗಳಿಗೆ ತಿಲ, ತಿಲಕ, ತಿಲಮಾತ್ರ, ತಿಲಸದೃಶ, ತಿಲತರ್ಪಣ, ತಿಲೋದಕ, ತಿಲಾಂಜಲಿ, ತಿಲತಂಡುಲ, ತೈಲೀನ, ತಿಲಕಾಲಿಕ, ತಿಲೋಪಮ, ತಿಲಸದೃಶ, ತೈಲ ಇತ್ಯಾದಿ ಇತ್ಯಾದಿ ಕರೆದಿದ್ದಾರೆ.

ಮಕರ ಸಂಕ್ರಮಣ ಅಥವಾ ಉತ್ತರಾಯಣ ಪುಣ್ಯಕಾಲದಲ್ಲಿ ಅಸೇತು ಹಿಮಾಲಯದವರೆಗೆ ಆಚರಿಸುವ ಆಚರಣೆಯಲ್ಲಿ ಅಲ್ಪಸ್ವಲ್ಪ ಭಿನ್ನತೆ ಕಂಡುಬಂದರೂ, ಮೂಲ ಮಂತ್ರವೊಂದೇ, ಇದು ಋತು ಬದಲಾವಣೆಯ ಕಾಲದ ಸೂರ್ಯಾರಾಧನೆಯ ಹಬ್ಬ. ತಮಿಳುನಾಡಿನಲ್ಲಿ ಇದನ್ನು 'ಪೊಂಗಲ್' ಎನ್ನುತ್ತಾರೆ. ಪೊಂಗಲ್ ಎಂದರೆ ಉಕ್ಕುವುದು ಹೊಮ್ಮುವುದು ಎಂದು ಅರ್ಥ. ಸುಗ್ಗಿಯ ಸಮಯದಲ್ಲಿ ಧಾನ್ಯಾದಿಗಳಿಂದ ಮನೆ-ಮನಗಳೆಲ್ಲ ಉಕ್ಕುತ್ತಿರುವಾಗ ಆಚರಿಸುವ ಹಬ್ಬವಾದ್ದರಿಂದ ಇದು ಅವರಿಗೆ ಪೊಂಗಲ್. ಅವರು ಸಂಕ್ರಾಂತಿಯ ಸಮಯದಲ್ಲಿ ಸೂರ್ಯನನ್ನು ವಿವಿಧರೂಪದಲ್ಲಿ ಪೂಜಿಸುವರು.

( 41 ನೇ ಪುಟ ನೋಡಿ )

# ಭತ್ತದ ಕೂಳೆಬೆಳೆಯನ್ನು ನೀವೇಕೆ ಬೆಳೆಯಬಾರದು ?

—ಐ. ಸಿ. ಎ. ಆರ್.
ನವದೆಹಲಿ

ಭತ್ತದ ಬೆಳೆಯಲ್ಲಿ ಕೂಳೆಬೆಳೆ ಬೆಳೆಯುವುದು ಹೊಸದೇನಲ್ಲ. ಎರಡನೇ ಬೆಳೆಗೆ ಸಾಕಾಗುವಷ್ಟು ನೀರಿಲ್ಲದೆ, ಒಂದೆರಡು ಹದ ನೀರು ಮಾತ್ರವಿದ್ದಾಗ (ಕೆರೆ-ಕಟ್ಟೆಗಳಲ್ಲಿ) ಮಳೆಯನ್ನು ನೆಚ್ಚಿ ಕಟಾವಾದ ಬಳಿಕ ಭತ್ತದ ಕೂಳೆಗಳನ್ನು ಚಿಗುರಲು ಹಾಗೇ ಬಿಟ್ಟು ಈ ಕೂಳೆ ಬೆಳೆಯಿಂದ ಇಳುವರಿಯನ್ನು ನಮ್ಮಲ್ಲಿ ಕೆಲವೆಡೆ ತೆಗೆಯುತ್ತಾರೆ. ಜಮೀನಿನಲ್ಲಿ ಮೊದಲನೆ ಬೆಳೆಗೆ (ಮುಖ್ಯ ಬೆಳೆ) ಹಾಕಿದ ಗೊಬ್ಬರದ ಅಂಶ ಉಳಿದಿರುತ್ತದೆ. ಮಣ್ಣಿನಲ್ಲಿನ ತೇವಾಂಶದಿಂದ ಈ ಕೂಳೆಗಳು ಮತ್ತೆ ಚಿಗುರೊಡೆದು ಭತ್ತದ ಇಳುವರಿ ನೀಡಬಲ್ಲವು. ಮಹತ್ವದ ಅಂಶವೆಂದರೆ ಮುಖ್ಯ ಬೆಳೆಗಿಂತ ಕೂಳೆಬೆಳೆ ಹೆಚ್ಚು ಲಾಭದಾಯಕವೆಂಬುದು

ಭತ್ತದ ಕೂಳೆಬೆಳೆಗೆ ಸಂಬಂಧಿಸಿದಂತೆ ಕೊಡಗಿನ ಮಡಕೇರಿಯ ಕೃಷಿ ಸಂಶೋಧನಾ ಕೇಂದ್ರನುತ್ತು ಕರೆಮನೆ ಎಂಬ ಹಳ್ಳಿಯಲ್ಲಿ ಪ್ರಯೋಗಗಳನ್ನು ನಡೆಸಲಾಯಿತು. ಇಲ್ಲಿ ಕೂಳೆ ಬೆಳೆಗೆ ಯಾವ ತಳಿಗಳು ಯೋಗ್ಯ ಎಂಬ ಬಗ್ಗೆಯೂ ಪ್ರಯೋಗಗಳನ್ನು ನಡೆಸಲಾಯಿತು. 'ಇಂಟಾನ್' ಭತ್ತದ ತಳಿ ಎಲ್ಲ ತಳಿಗಳಿಗಿಂತ ಯೋಗ್ಯವೆಂದು ಕಂಡು ಬಂದಿದೆ. ಈ ತಳಿ 1976 ರಲ್ಲಿ 109 ದಿನಗಳ ಅವಧಿಯಲ್ಲಿ ಹೆಕ್ಟೇರಿಗೆ 1.7 ಟನ್ ಇಳುವರಿ ನೀಡಿದೆ. ಇದೇ ಜಮೀನಿನಲ್ಲಿ ಈ ಹಿಂದಿನ ಮುಖ್ಯ ಬೆಳೆಯಿಂದ 2.2 ಟನ್ ಇಳುವರಿ ಬಂದಿದೆ. ಮುಖ್ಯ ಬೆಳೆಯ ಕಟಾವು 1076 ರ ಜನವರಿ 30 ರಂದು ಕೂಳೆಬೆಳೆಯ ಕಟಾವು ಮೇ 18 ರಂದೂ ಆಯಿತು. ನಿರಾಯಾಸವಾಗಿ, ಹೆಚ್ಚಿನ ಯಾವ ಕೃಷಿಲಾಗೋಡುಗಳೂ ಇಲ್ಲದೆ ಕೂಳೆಬೆಳೆಯಿಂದ ಮುಖ್ಯ ಬೆಳೆಯ ಶೇ 77 ರಷ್ಟು ಇಳುವರಿಯನ್ನು ಪಡೆಯಲಾಗಿದೆ. ಶಿವಮೊಗ್ಗ ಮತ್ತು ಕೊಡಗಿನ ಕೆಲವು ರೈತರ ಗಮನ ಇತ್ತ ಆಕರ್ಷಿತವಾಗಿದೆ.

ಕರೆಮನೆ ಹಳ್ಳಿಯಲ್ಲಿ ನಡೆಸಿದ ಪ್ರಯೋಗಗಳಿಂದ ಇನ್ನೂ ಆಶಾದಾಯಕ ಫಲಿತಾಂಶಗಳು ಹೊರಬಿದ್ದಿವೆ. ಮುಖ್ಯ ಬೆಳೆಗಿಂತ ಕೂಳೆಬೆಳೆಯಿಂದಲೇ ಹೆಚ್ಚು ಲಾಭ ಬಂದಿದೆ. ಕೂಳೆಬೆಳೆಯ ಅವಧಿ ಸುಮಾರು ಡಿಸೆಂಬರ್ ಜನವರಿಯಿಂದ ಏಪ್ರಿಲ್ ಮೇ ವರೆಗಿರುತ್ತದೆ. ಈ ಅವಧಿಯಲ್ಲಿ ಪ್ರಖರಬಿಸಿಲಿರುವುದರಿಂದ ರೋಗ ರುಜಿನಗಳ ಹಾವಳಿಯೂ ಕಡಿಮೆ. ಆದರೆ ಕೂಳೆಬೆಳೆಯ ಕಟಾವು ಮಳೆಗಾಲ



ಪ್ರಾರಂಭವಾಗುವಾಗ ಆಗುವುದರಿಂದ ಜಾಗರೂಕತೆಯಿಂದ ಮಳೆಯಿಂದ ಬೆಳೆಗೆ ಹೆಚ್ಚು ಹಾನಿಯಾಗದಂತೆ ಕಟಾವು ಮಾಡಬೇಕು. ಕೂಳೆಬೆಳೆಗೆ ಯಾವ ಕೃಷಿ ಕಾರ್ಯಗಳ ಗೋಜಿಲ್ಲ, ಗೊಬ್ಬರ ಹಾಕಬೇಕಿಲ್ಲ; ಕುಯಿಲಿನ ಕಾಲದಲ್ಲಿ ಕೃಷಿ ಕೂಲಿಯಾಳುಗಳಿಗೆ ಬೇರಾವ ಕೆಲಸದ ಒತ್ತಡವಿರುವುದಿಲ್ಲ- ಕೂಲಿ ಕಡಿಮೆ. ಈ ಕಾರಣಗಳಿಂದ ಈ ಬೆಳೆ ಮುಖ್ಯ ಬೆಳೆಗಿಂತ ಲಾಭದಾಯಕ. ಕರ್ನಾಟಕದಲ್ಲಿ ಭತ್ತ ಬೆಳೆಯುವ 685 ಸಾವಿರ ಹೆಕ್ಟೇರು ಜಮೀನಿನಲ್ಲಿ 179 ಸಾವಿರ ಹೆಕ್ಟೇರಿನಲ್ಲಿ ಭತ್ತದ ಒಂದೇ ಒಂದು ಬೆಳೆ ಬೆಳೆಯಲಾಗುತ್ತಿದೆ. ಮಳೆಯಾಧಾರಿತ, ತಗ್ಗಿನ ಪ್ರದೇಶಗಳಲ್ಲಿ, ಜೋಪಿನ ನೀರಿನ ಆಶ್ರಯವಿರುವೆಡೆ ಕೂಳೆಬೆಳೆಯನ್ನು ಹೆಚ್ಚು ಹೆಚ್ಚು ಬೆಳೆಯಬಹುದು. ಈ ಬಗ್ಗೆ ನಮ್ಮ ರೈತರು ಏಕೆ ಪ್ರಯತ್ನಿಸಬಾರದು ? ●

---

( 39 ನೇ ಪುಟದಿಂದ )

ಅವರು ಪ್ರಾತಃಕಾಲದಲ್ಲಿ ಸೂರ್ಯಾರಾಧನೆಮಾಡಿ, 'ಪೊಂಗಲ್' ಎಂಬ ಹೆಸರಿನ ಭಕ್ಷ್ಯವನ್ನು ಮಾಡಿ, ಆ ಪಾತ್ರೆಗೆ ಹೊಸ ಅರಿಸಿನದ ಕೊಂಬನ್ನು ಕಟ್ಟಿ, ಪೂಜಿಸಿ, ನೈವೇದ್ಯಮಾಡಿ ಪ್ರಸಾದ ರೂಪವಾಗಿ ಸ್ವೀಕರಿಸುವರು. 'ಪೊಂಗಲ್' ಅಥವಾ ಉತ್ತರಾಯಣ ಪುಣ್ಯಕಾಲವು ತಮಿಳುನಾಡಿನ ಪ್ರಾಚೀನ ಹಬ್ಬಗಳಲ್ಲಿ ಪ್ರಮುಖವಾದದ್ದು, ಬದುಕೆಲ್ಲಾ ಸಿಹಿಯಾಗಿರಬೇಕೆಂದು ಆ ಹಬ್ಬದಲ್ಲಿ ಅವರ ಬಯಕೆ. ಗೋಭೂಮಿ ತಿಲಾದಿ ಷೋಡಶದಾನಗಳಿಗೆ ಈ ಉತ್ತರಾಯಣ ಪ್ರಶಸ್ತವೆಂದು ಪುರಾಣಗಳಲ್ಲಿ ಹೇಳಲಾಗಿದೆ. ಅನೇಕ ಶಾಸನಗಳಲ್ಲಿ ರಾಜಮಹಾರಾಜರು ಉತ್ತರಾಯಣಪುಣ್ಯಕಾಲದಲ್ಲಿ ದಾನಮಾಡಿದುದರ ಉಲ್ಲೇಖಗಳಿವೆ. ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗನು ಕ್ರಿ. ಶ. 871ರ ಉತ್ತರಾಯಣ ಪುಣ್ಯಕಾಲದಲ್ಲಿ ಪಿತೃಗಳಿಗೆ ಮತ್ತು ತನ್ನ ಪುಣ್ಯವೃದ್ಧಿಗಾಗಿ ಒಂದು ಊರನ್ನು ದಾನಮಾಡಿದಂತೆ ಶಾಸನವಿದೆ. ಏನೇ ಆಗಲಿ ಉತ್ತರಾಯಣ ಪುಣ್ಯಕಾಲ ಭಾರತೀಯರ ಭಾವೈಕ್ಯ ವೃದ್ಧಿಯ ಒಂದು ಪ್ರಮುಖ ಹಬ್ಬ. ಈ ವರ್ಷದ ಈ ಪುಣ್ಯಕಾಲ ಸಮಸ್ತ ಮಾನವಕೋಟಿಗೆ ಸುಖ ಸಮೃದ್ಧಿಗಳನ್ನು ಕೊಡಲೆಂದು ಹಾರೈಸುತ್ತೇನೆ.

( ಆಕಾಶವಾಣಿ ಕೃಪೆಯಿಂದ ) ●

# ಅಕ್ಕಮಹಾದೇವಿಯ ಒಂದು ವಚನ

—ಎಂ. ಜಿ. ವೆಂಕಟೇಶಯ್ಯ.

ಸಾಮಾನ್ಯವಾಗಿ ವಚನಗಳೆಂದರೆ ಸುಲಭವಾಗಿ ನಮಗೆ ಅರ್ಥವಾಗುವ ಮಾತುಗಳೆಂದು ಜನರ ಅಭಿಪ್ರಾಯ.

ಇದು ಸಾಮಾನ್ಯವಾಗಿ ಅನೇಕ ವಚನಗಳ ವಿಚಾರದಲ್ಲಿ ಹೇಳಬಹುದಾದರೂ ಕೆಲವು ವಚನಗಳಲ್ಲಿ ವೇದಾಂತದ ಉಪನಿಷತ್ತುಗಳಲ್ಲಿ ಕಂಡುಬರುವ ನಿಗೂಢವಾದ ಅರ್ಥಗಳನ್ನು ನಾವು ಕಾಣಬಹುದು. ಇಲ್ಲಿ ನಾನು ಅರ್ಥವನ್ನು ಕೊಟ್ಟಿರುವ ಅಕ್ಕಮಹಾದೇವಿಯರ ವಚನ ಆ ಗುಂಪಿಗೆ ಸೇರಿದ್ದು.

ಹನ್ನೆರಡನೆಯ ಶತಮಾನ, ಆಗಿನ ಮಾನವರ ಮನಸ್ಸು ಧರ್ಮ ಬ್ರಹ್ಮಾದಿಗಳನ್ನು ತಿಳಿಯಬೇಕೆಂಬ ಆಸೆಯಲ್ಲಿಯೆ ಲೀನ. ಅಧ್ಯಾತ್ಮ ಪ್ರಪಂಚದಲ್ಲಿಯೆ ಮಾನವನ ಜೀವನ ನಡೆಯುತ್ತಿತ್ತು. ಇವು ಈ ವಚನಗಳ ಹಿನ್ನೆಲೆ.

ಅಕ್ಕಮಹಾದೇವಿಯು ಈ ವಚನದಲ್ಲಿ ಪ್ರಶ್ನೆ ಮಾಡುತ್ತಿರುವುದು ಯಾರನ್ನು ಎಂಬ ವಿಚಾರವು ನನಗೆ ಈ ರೀತಿಯಾಗಿ ಹೊಳೆಯುತ್ತಿದೆ. ವಚನ ಶಾಸ್ತ್ರಜ್ಞರೂ, ಅದರಲ್ಲಿ ನುರಿತ ಅನುಭವ ಪಡೆದ ವಿದ್ವಾಂಸರೂ, ಇದು ಎಷ್ಟರಮಟ್ಟಿಗೆ ಸಾಧು ಎಂಬುದನ್ನು ತಿಳಿಸಿದರೆ, ಅದರಿಂದ ಓದುಗರಿಗೆ ಉಪಯೋಗವಾಗಬಹುದು ಎಂದು ನನ್ನ ಭಾವನೆ.

1) ಚಿಲಿಮಿಲಿ ಎಂದೋಡುವ ಗಿಳಿಗಳಿರಾ ನೀವು ಕಾಣಿರೇ, ನೀವು ಕಾಣಿರೇ

ಆ ಕಾಲದಲ್ಲಿ ವೇದಾಧ್ಯಯನ ಮಾಡುವುದು ಹೇಗಿತ್ತೆಂದರೆ–ಗುರು ನುಡಿದಂತೆ ಶಿಷ್ಯನು ನುಡಿಯುವುದು–ಇದಕ್ಕೆ 'ಅಧ್ಯಯನ' ಎನ್ನುತ್ತಿದ್ದರು. ಈಗಲೂ ಅಧ್ಯಯನ ಎಂದರೆ ಅದೇ ಅರ್ಥವೆಂದು ತೋರುತ್ತದೆ. ಮಂತ್ರಗಳನ್ನು ಅಧ್ಯಯನ* ಮಾಡುತ್ತಾರೆ. ಇಲ್ಲಿ ಗಿಳಿಗಳು ಯಾರು ? ಗಿಳಿ ಪಾಠವನ್ನು ಕಲಿಯುವ ಮತ್ತು ಒಪ್ಪಿಸುವ –ವೇದಾಧ್ಯಯನ ಮಾಡುವರು. ಅರ್ಥವಿಲ್ಲದೆ ಅಧ್ಯಯನ ಮಾಡುವ ಗಿಳಿಗಳೇ..... ನೀವು ಕಂಡಿರಾ ?

2) ಸರವೆತ್ತಿ ಪಾಡುವ ಕೋಗಿಲೆಗಳಿರಾ, ನೀವು ಕಾಣಿರೇ

* ಗುರು ಮುಖಾದಕ್ಷರಾನು ಪೃಥ್ವೀಗ್ರಹಣಂ, ಅಧ್ಯಯನಂ "ಶಬ್ದಾರ್ಥ ಜ್ಞಾನಂ ವೇದನಂ"



ಈ (ವಾಕ್ಯವು) ಮಾತು ಸಂಗೀತಗಾರರಿಗೆ ಅನ್ವಯಿಸುತ್ತದೆ- ಸರವೆತ್ತಿ- ಎಂಬುದರಿಂದ ತಾರಕಸ್ಥಾಯಿಯಲ್ಲಿ ಮೂರ್ಛನೆಗಳನ್ನು ಹಾಡುವ ಸಂಗೀತಗಾರರು- ಅವರೇ ಕೋಗಿಲೆಗಳು. ಕೋಗಿಲೆ ತನ್ನ ಸ್ವರವನ್ನು ತಾನೇ ಅರ್ಥಮಾಡಿಕೊಳ್ಳುವುದಿಲ್ಲ. ಅದಕ್ಕೆ ಅರ್ಥವಿಲ್ಲ, ವಿಕೃತಿಯಿಲ್ಲ, ಅದನ್ನೇ ಸಂಗೀತಗಾರರು ಪಂಚಸ್ವರ (-ಪ) ಎನ್ನುತ್ತಾರೆ.

3) ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೇ, ನೀವು ಕಾಣಿರೇ,

ಇದು ದೇವಸ್ಥಾನದಲ್ಲಿ ನೃತ್ಯವಾಡುವ ನಾಟ್ಯವಿಶಾರದರ ವಿಚಾರ. ದೇವರ ಮುಂದೆಯೆ ಗೀತವಾದ್ಯಗಳೊಡನೆ ನೃತ್ಯಮಾಡುತ್ತಾರೆ.... ತುಂಬಿಗಳಂತೆ ಕ್ಷಣಿಕ ಸುಖವನ್ನು ಹೊಂದುತ್ತಾರೆ.

4) ಕೊಳನ ತಡಿಯೊಳಾಡುವ ಹಂಸೆಗಳಿರಾ, ನೀವು ಕಾಣಿರೇ, ನೀವು ಕಾಣಿರೇ,

ಇದು ತೀರ್ಥಸ್ನಾನಗಳನ್ನುಮಾಡಿ ಪುಣ್ಯವನ್ನು ಪಡೆಯಬೇಕೆಂಬುವವರ ವಿಚಾರ. ಕರ್ಮವೇ ದೇವರು ಎಂದು ಸಾರಿದ ಮೀಮಾಂಸಕರ ವಿಚಾರ. ಅವರಿಗೆ ಬ್ರಹ್ಮಗೋಚರವಾಯಿತೆ ? ಇಲ್ಲ.

5) ಗಿರಿಗಹ್ವರದೊಳಾಡುವ ನವಿಲುಗಳಿರಾ, ನೀವು ಕಾಣಿರೇ, ನೀವು ಕಾಣಿರೇ,

ಇದು ಬಣ್ಣದ ಬಟ್ಟೆಯನ್ನುಟ್ಟು ಯೋಗಾಭ್ಯಾಸಮಾಡುತ್ತಾ ಪರ್ವತಗಳಲ್ಲಿ ಓಡಾಡುವ ಹಟಯೋಗಿಗಳಿಗೆ ಕೇಳಿದ ಮಾತು. ನವಿಲಿನಂತೆ ಅವರು ಆನಂದ ಪಡುತ್ತಾರೆ.

6) ಚೆನ್ನಮಲ್ಲಿಕಾರ್ಜುನ ನೆಲ್ಲಿರ್ದಹನೆಂದು ನೀವು ಹೇಳಿರೇ, ನೀವು ಹೇಳಿರೇ.

ಪರ ಬ್ರಹ್ಮ ಸ್ವರೂಪವನ್ನು ವೇದಾಧ್ಯಯನದಿಂದಾಗಲಿ, ಸಂಗೀತದಿಂದಾಗಲಿ, ನಾಟ್ಯದಿಂದಾಗಲಿ, ಯಾಗಯಜ್ಞಗಳಿಂದಾಗಲಿ, ಯೋಗಾಭ್ಯಾಸದಿಂದಾಗಲಿ ತಿಳಿಯಲು ಸಾಧ್ಯವಿಲ್ಲ, ತಾನು ಸತಿ,ಪತಿಗೆ ಕರುಣೆ ಹುಟ್ಟಿ ಪತಿಯೇ ತನ್ನನ್ನು ಸ್ವೀಕರಿಸಿದರೆ ಆಗ ಅನುಭವದಿಂದ ತಿಳಿಯಬೇಕು ಎಂಬುದು ಈ ವಚನದ ಅರ್ಥ. ಇಲ್ಲಿ ಯಾರನ್ನು ಆ ಮಹಾತಾಯಿ ಬೈದಿದ್ದಾಳೆ, ಟೀಕೆಮಾಡಿದ್ದಾಳೆ, ಎಂದು ಅರ್ಥ ಮಾಡುವುದು ಸರಿಯಲ್ಲ. ನಮ್ಮ ಜೀವನದ ಗುರಿ ಬ್ರಹ್ಮ ತತ್ವದ ತಿಳಿವಳಿಕೆ ಎಂದರೆ ಅದು ಮೇಲೆ ಹೇಳಿದವುಗಳಿಂದ ಆಗಲಾರದು ಎಂಬ ಅಭಿಪ್ರಾಯ ಮಾತ್ರ ಇಲ್ಲಿದೆ. ಇಂಥಾ ಅರ್ಥಪ್ರಾಕಾರಗಳನ್ನು ಅನುಭಾವಾರ್ಥ ( Mystic ) ಎನ್ನಬಹುದು.

# ಮರಳಿ ಬಂದ ಸೌಭಾಗ್ಯ

—ಶ್ರೀಮತಿ ಬಿ. ಎಸ್. ಜಯಾಶಂಕರ್

**ಇಲ್ಲಿಯವರೆಗೆ..................**

ಸಾತ್ವಿಕ ಜೀವಿ ಚಂದ್ರಪ್ಪನವರ ಮಗ ಮೋಹನ್ ರಾಷ್ಟ್ರಕ್ಕಾಗಿ ಪ್ರಾಣಾರ್ಪಣೆ ಮಾಡಿದ: ಆದರೆ ಮುದ್ದು ಮಡದಿಯನ್ನು ನಿರ್ಭಾಗ್ಯಳನ್ನಾಗಿ ಮಾಡಿದ. ಉಷೆಯ ಅಣ್ಣ ಸುಧೀರ್ ತಂಗಿಯ ವೈಧವ್ಯಕ್ಕಾಗಿ ಚಿಂತಿಸಿದ. ಸ್ನೇಹಿತ ವಿಜಯ ಸುಧೀರನನ್ನು ಸಂತೈಸಿ ಮುಂದಿನ ಮಾರ್ಗದ ಆಲೋಚನೆಗೆ ತೊಡಗಿಸಿದ. ಮಾವನವರು ಮಾಡಿದ ಆಸ್ತಿಯನ್ನು ಉಷೆಯು ಅನಾಥ ಮಕ್ಕಳ ಅಭಿವೃದ್ಧಿಗಾಗಿ ದಾನ ಧರ್ಮ ಮಾಡಿದಳು. ಪತಿಯ ನೆನಪು ಮರುಕಳಿಸಬಾರದೆಂದು ತಿಳಿದು ತನ್ನ ಮನೆಯನ್ನು ವಿದ್ಯಾರ್ಥಿ ನಿಲಯವನ್ನಾಗಿ ಮಾಡಿದಳು. ಮನಸ್ಸಿನ ಬೇಸರ ಕಳೆಯಲು ಬೆಂಗಳೂರಿನ ಮಹಾರಾಣಿ ಕಾಲೇಜಿಗೆ ಓದಲ ಸೇರಿಕೊಂಡಳು. ಉಷಳ ವೇಷ ಭೂಷಣಗಳು ಕಾಲೇಜಿನ ಹುಡುಗಿಯರಿಗೆ ಗೇಲಿ ಮಾಡಲು ಸಹಾಯಕವಾಗಿದ್ದವು. ವಿಜಯನ ತಮ್ಮ ಶೇಖರ್ ಉಷಾಳನ್ನು ಹಣೆಗೆ ಕುಂಕುಮ ಮುಡಿಗೆ ಹೂ ಮುಡಿ ಎಂದು ಶ್ರೀ ರಾಮಕೃಷ್ಣರ ವಾಣಿಯನ್ನು ಉದಾಹರಿಸುತ್ತ ಒತ್ತಾಯಿಸಿದ.

ಕೇವಲ ಒಂದು ದಿನಕ್ಕೆ ಗುರತು ಸಿಗದ ಹಾಗಾಗಿದ್ದ ನಿಸ್ತೇಜವಾಗಿದ್ದ. ಅವನ ಕಣ್ಣುಗಳಲ್ಲಿ ಯಾತನೆ ತುಂಬಿತ್ತು: ವಿಜಯನನ್ನು ನೋಡಿ ಹತ್ತಿರ ಬರಲು ಸನ್ನೆ ಮಾಡಿದ. ಮಾತು ತೊದಲುತಿತ್ತು, ನಾನು ಬದಕುವುದಿಲ್ಲ ಆದರೆ ಉಷೆಯದೇ ಚಿಂತೆ ನನಗೆ 'ಅವಳನ್ನು ಕೈಬಿಡಬೇಡ'....ಎಂದು ಹೇಳಿ ಉಷೆಯ ಕೈಯನ್ನು ವಿಜಯನ ಕೈಗಿಟ್ಟು ಮುಂದೆ ಹೇಳುತ್ತಿದ್ದಂತೆಯೇ, ಕುತ್ತಿಗೆ ವಾಲಿತು, ಪ್ರಾಣಪಕ್ಷಿ ಹಾರಿ ಹೋಯಿತು. ಅಣ್ಣಾ, ಎಂದು ಚೀರಿದ ಉಷೆ, ಸುಧೀರನ ಮೇಲೆ ಉರುಳಿದಳು.

ಆ ವೇಳೆಗೆ ಬಂದ ಶೇಖರ್ ಆ ಘೋರ ಸನ್ನಿವೇಶವನ್ನು ನೋಡಲಾರದೆ. ಕಣ್ಣು ಮುಚ್ಚಿಕೊಂಡ. ಈ ಅನಿರೀಕ್ಷಿತವಾದ ಗೆಳೆಯನ ಸಾವು ವಿಜಯನನ್ನೂ ದಿಗ್ಭ್ರಮೆಗೊಳಿಸಿತು. ಕ್ಷಣಕಾಲ ಚೇತರಿಸಿಕೊಂಡ ವಿಜಯ, ಉಷಳನ್ನು ಒತ್ತಟ್ಟಿಗೆ ಮಲಗಿಸಿದ. ಶೇಖರ್ ನೀರು ಸಿಂಪಡಿಸಿ ಗಾಳಿಹಾಕಿದ, ಕಣ್ಣುಬಿಟ್ಟು ಉಷೆ ಇದ್ದ ಒಬ್ಬ ಆಶ್ರಯದಾತನಾದ ಅಣ್ಣನನ್ನು ವಿಧಿ ಕಿತ್ತುಕೊಂಡಿತ್ತು, ನಾನು ಬದುಕಿ ಪ್ರಯೋಜನವೇನು? ಆದಷ್ಟು ಬೇಗ ನಿನ್ನ ಬಳಿ ಬರಲು ಇಚ್ಛಿಸುತ್ತೇನೆ. ಎನ್ನುತ್ತಾ ತಲೆಚಚ್ಚಿ ಕೊಂಡು ಹುಚ್ಚಿಯಂತೆ ಅಳತೊಡಗಿದಳು.



ಸಮಾಧಾನ ಮಾಡಿದಷ್ಟೂ ಅವಳ ದುಃಖ ಹೆಚ್ಚುತ್ತಿತು. ಮನೆಯ ಓನರ್ (Owner) ಸೋಮಪ್ಪನವರು ವಿಷಯ ತಿಳಿದು ದಾವಿಸಿ ಬಂದರು. ವಿಜಯನನ್ನು ಕುರಿತು, ವಿದ್ಯಾವಂತರಾದ ನೀವೂ ಹೀಗೆ ಧೈರ್ಯಗೆಟ್ಟರೆ ಹೇಗೆ! "ಪ್ರಪಂಚದಲ್ಲಿ ಹುಟ್ಟಿದವರೆಲ್ಲಾ ಉಳಿಯಲು ಸಾಧ್ಯವೆ," ಎಲ್ಲವೂ ಧೈವಾಧೀನ. ಇಂದು ಇವರಾದರೆ ನಾಳೆ ನಾವು, ಧೈರ್ಯ ತಂದು ಕೊಳ್ಳಿ, ಎಂದು ಸಂತೈಸಿದರು. ನಿಮ್ಮವರು ಯಾರಿಗಾದರು ಟೆಲಿಗ್ರಾಂ ಮಾಡಬೇಕಾದರೆ ಅಡ್ರಸ್ ಕೊಡಿ ಎಂದರು. ಉಷಾ ಕಡೆಗೆ ಪ್ರಶ್ನಾರ್ಥಕವಾಗಿ ನೋಡಿದ ವಿಜಯ. ನಿಮ್ಮನ್ನ ಬಿಟ್ಟರೆ ನಮಗೆ ಯಾರೂ ಹೇಳಿಕೊಳ್ಳುವ ಬಂಧುಗಳಿಲ್ಲ, ಎಂದಳು ಉಷೆ. ಆ ಮಾತು ಅಣ್ಣ ತಮ್ಮಂದಿರಿಗೆ ಕಣ್ಣೀರು ತರಸಿತು.

ಮುಂದಿನ ಕಾರ್ಯಕ್ಕೆ ಸೊಮಪ್ಪನವರೇ ನೆರವಾದರು. ಶವವಾಹನಕ್ಕೆ ಫೋನ್ ಮಾಡಿದರು. ತಾಯಿ ಪಾರ್ವತಮ್ಮನವರು ಇಂದೇಕೆ ಮಗಳ ಸುಳಿವಿಲ್ಲ. ಬೇರೆಯಾರೋ ಬಂದಂತಿದೆ ಎಂದು ತಮ್ಮ ಶಕ್ತಿಯನ್ನೆಲ್ಲಾ ಒಟ್ಟುಗೂಡಿಸಿ ಹೊರಗೆ ಬಂದರು. ಸುಧೀರನನ್ನು ಮಲಗಿಸಿ ಹಾರ ಹಾಕಿ ಊದುಬತ್ತಿಯನ್ನು ಹಚ್ಚಿಟ್ಟಿದ್ದರು. ಎಲ್ಲವನ್ನೂ ನೋಡಿದ ಅವರು ಹುಚ್ಚರಂತಾದರು. ಮಗಳ ಕೈ ಹಿಡಿದು ಮಗನ ಬಳಿಗೆ ಹೋಗಬೇಕೆಂದರು. ಕರೆದುಕೊಂಡು ಹೋಗಿ ಕುಳ್ಳಿರಿಸಿದಳು ಉಷೆ. ಅಲ್ಲಿದ್ದವರಿಗೆಲ್ಲಾ ದುಃಖ ಮರುಕಳಿಸಿತು. ಮಗನ ತಲೆ ನೇವರಿಸುತ್ತಾ ಅಸ್ಪಷ್ಟವಾಗಿ ಏನೇನೋ ಮಾತಾಡುತ್ತಿದ್ದರು. ನಂತರ ಮೇಲಕ್ಕೆದ್ದವರೇ ಇದೋ ನಾನು ಬಂದೆ? ಸುಧೀರ, ನನ್ನನ್ನು ಕರೆದುಕೋ? ಎಂದವರೇ ಮಗನ ಮೇಲೆ ಉರುಳಿದವರು ಮತ್ತೆ ಏಳಲಿಲ್ಲ.

ಉಷಾ ಈಗ ಅಳಲಿಲ್ಲ, ಅವಳ ಕಣ್ಣೀರು ಬತ್ತಿಹೋಗಿತ್ತು, ಮಂಕಾಗಿ ಕುಳಿತಿದ್ದ ಅವಳು ಪ್ರೇಕ್ಷಕಳಂತಿದ್ದಳು.

ಆ ಬಡಾವಣೆಯಲ್ಲಿ ಇದು ಅಪೂರ್ವ ಸಂಗತಿಯಾಗಿತ್ತು. ಶವ ವಾಹನವು ತಾಯಿ ಮಗನ ಶವಗಳನ್ನು ಹೊತ್ತುಕೊಂಡು ಸ್ಮಶಾನಕ್ಕೆ ಹೊರಟಿತು. ವಿಜಯ ಪುರೋಹಿತರನ್ನು ಕರೆದುಕೊಂಡು ಹೋಗಿ, ಶವ ಸಂಸ್ಕಾರವನ್ನು ಸಾಂಗವಾಗಿ ನೆರವೇರಿಸಿ ಬಂದ. ಶೇಖರ ಮನೆಯಲ್ಲೇ ಉಳಿದಿದ್ದ ಉಷೆ ಮಾತಿಲ್ಲದೆ ಶೂನ್ಯವನ್ನೇ ದಿಟ್ಟಿಸುತ್ತಿದ್ದಳು ಅವಳ ಮನಸ್ಸಿಗೆ ಅಘಾತವಾಗಿತ್ತು.

ಮಾವ ಮತ್ತು ಪತಿಯ ಸಾವು ಮರೆಯುವ ಮೊದಲೇ ತನ್ನವರಾದ ತಾಯಿ ಮತ್ತು ಅಣ್ಣ, ಒಟ್ಟಿಗೇ ಕಾಣದಲೋಕಕ್ಕೆ ತನ್ನನ್ನು ತಬ್ಬಲಿಯನ್ನಾಗಿಸಿ ಅಗಲಿಹೋಗಿದ್ದರು. ನಾನು ಇನ್ನಾವ ದಾರಿ ಹಿಡಿಯಬೇಕು? ಇನ್ನೀ ಬದುಕು ಯಾರಿಗಾಗಿ? ಮಾತಿಲ್ಲದೆ ಮೌನವಾಗಿದ್ದ ಹೃದಯದಲ್ಲಿ ದುಃಖಾಗ್ನಿಪರ್ವತ ಅಡಗಿತ್ತು.

ಸೋಮಪ್ಪನವರು ತಮ್ಮ ಮನೆಯವಳನ್ನು ಕಳಿಸಿ, ಮನೆ ಸ್ವಚ್ಛ ಮಾಡಿಸಿ, ನೀರು ಕಾಯಿಸಲು ಹೇಳಿದರು. ಇದಾವುದರ ಪರಿವೆಯೂ ಉಷೆಗಿರಲಿಲ್ಲ. ಸನಿಯದಲ್ಲಿ

ಬಂದು ಕುಳಿತ ವಿಜಯ. ಸುಧೀರ ಕಣ್ಣು ತುಂಬಿ ಉಷಳನ್ನು ಕೈಬಿಡಬೇಡ, ಎಂದು ಹೇಳಿದ್ದ ಮಾತು ಇನ್ನೂ ಕಿವಿಯಲ್ಲಿ ಮೊರೆಯುತ್ತಿತ್ತು. ಕೈ ಹಿಡಿದೆಬ್ಬಿಸಿ ಹೇಳಿದ, ಉಷಾ, ಏಳು ಸ್ನಾನಮಾಡಿಕೋ, ನಮಗೂ ನಿನ್ನಂತೆಯೇ ದುಃಖವಿದೆ, ನಿನಗೆ ಸುಧೀರ್ ಹೇಗೆ ಅಣ್ಣನೋ ಹಾಗೆಯೇ ನನಗೆ ಅವನು ಪ್ರಾಣಮಿತ್ರ, ನಿನ್ನ ಭಾರವನ್ನು ನನಗೆ ಹೊರಿಸಿ ಪರಂಧಾಮವನ್ನು ಸೇರಿದ ಗೆಳೆಯನಿಗೆ ನಾನು ಎಂದೂ ದ್ರೋಹಬಗೆಯಲಾರೆ? ನನ್ನ ಮಾತಿನ ಮೇಲೆ ನಂಬಿಕೆಯಿಡು. ಊಂ! ಏಳು, ಮೊದಲು ಸ್ನಾನಮಾಡಿ ದೇವರಲ್ಲಿ ಪ್ರಾರ್ಥಿಸು, ನಿನ್ನ ತಾಯಿಗೂ ಅಣ್ಣನಿಗೂ ಸದ್ಗತಿಯಾಗಲಿ ಎಂದು ಹೇಳಿದ ವಿಜಯನ ಕರುಣೆ ತುಂಬಿ ಹೇಳಿದ ಮಾತು ಅವಳ ದುಃಖದ ಕಟ್ಟೆ ಒಡೆಯಿತು. "ಯಾರಿಗಾಗಿ ನಾನು ಬದುಕಬೇಕು? ನನಗೆ ಈ ಬದುಕು ಇನ್ನು ಸಾಕು", ಎಂದು ಬಿಕ್ಕಳಿಸಿದಳು ಉಷೆ. "ನನಗಾಗಿ ನೀನು ಬದುಕಬೇಕು, ಇಂದಿನಿಂದ ನಿನ್ನ ಬಾಳೇ ನನ್ನ ಬಾಳು, ಸಮಾಧಾನ ತಂದುಕೋ", ಎಂದ ವಿಜಯ.

ಅವನಿಗರಿವಿಲ್ಲದಂತೆಯೇ ಆ ಮಾತು ಅವನ ಹೃದಯದಿಂದ ಹೊರಬಂದಿತ್ತು. ಆದುವರೆವಿಗೂ ಸುಮ್ಮನೆ ಇದ್ದ ಶೇಖರ, 'ಹೌದು ನಾವಿರುವವರೆಗೂ ನೀವು ಅನಾಥರಲ್ಲ, ಇನ್ನು ಹೆಚ್ಚಿಗೆ ಚಿಂತೆ ಮಾಡದೆ, ಎದ್ದು ಸ್ನಾನ ಮಾಡಿಕೊಳ್ಳಿ, ಆಗಲೆ 10 ಗಂಟೆಯಾಗಿದೆ' ಎಂದು ಬಲವಂತ ಮಾಡಿದ. ತನ್ನ ಬುದ್ಧಿಯ ಸ್ವಾಧೀನವನ್ನೇ ಕಳೆದುಕೊಂಡಿದ್ದ ಉಷೆ ಮರುಮಾತಿಲ್ಲದೆ ಸ್ನಾನಮಾಡಿ ದೀಪಹಚ್ಚಿ, ತನ್ನ ಅಣ್ಣನಿಗೂ, ತಾಯಿಗೂ ಸದ್ಗತಿ ದೊರೆಯುವಂತೆ ದೇವರಲ್ಲಿ ಮೊರೆಯಿಟ್ಟಳು.

ವಿಜಯ-ಶೇಖರ ಸ್ನಾನಮುಗಿಸಿ ಕಾಣದ ದೇವರಿಗೆ ಕೈಮುಗಿದರು. ಅಷ್ಟರಲ್ಲಿ ಸೋಮಪ್ಪನವರ ಪತ್ನಿ ಸರ್ವಮಂಗಳಮ್ಮ ಊಟಕ್ಕೆ ಮೂವರಿಗೂ ತಂದಿಟ್ಟು ಉಷಳಿಗೆ ಸಮಾಧಾನ ಹೇಳಿ ಹಿಂದಿರುಗಿದರು. ಶೇಖರ ಮೂವರಿಗೂ ಬಡಿಸಿದ, ಮೂಕಳಂತೆ ಇವರು ಹೇಳಿದಂತೆ ಮಾಡುತ್ತಿದ್ದಳು ಉಷೆ. ಊಟದ ಶಾಸ್ತ್ರ ಮುಗಿಸಿದರು. ಎಲ್ಲರಿಗೂ ಬೇಸರವಾಗಿತ್ತು ಮಲಗಿದರೆ ಸಾಕೆನಿಸುತ್ತಿತ್ತು.

ರೂಮಿನಲ್ಲಿ ಒಬ್ಬಳೇ ಮಲಗಲು ಉಷಳಿಗೆ ಹೆದರಿಕೆಯಾಯಿತು. ಸುಮ್ಮನೆ ನಿಂತಳು, ಇದನ್ನರಿತು ಶೇಖರ ಹೇಳಿದ, ಅಣ್ಣಾ, 'ನಿನ್ನ ಹಾಸಿಗೆ ಅತ್ತ ಸರಿಸು, ಉಷಾ ಒಬ್ಬರೇ ಮಲಗಲು ಹೆದರಿಕೆಯಾಗಬಹುದು'. ಎಂದ ಸರಿ, ಎನ್ನುತ್ತಾ ತನ್ನ ಹಾಸಿಗೆಯನ್ನು ಅತ್ತ ಸರಿಸಿದ ವಿಜಯ. ಉಷಳಿಗೆ ಅಲ್ಲೇ ಮಲಗಲು ಜಾಗ ಮಾಡಿಕೊಟ್ಟು ಮಲಗಲು ತಿಳಿಸಿ, ಅಣ್ಣತಮ್ಮಂದಿರು ಒತ್ತಟ್ಟಿಗೆ ಮಲಗಿದರು. ಮೂವರು ತಮ್ಮ ಯೋಚನೆಗಳಲ್ಲಿ ಮುಳುಗಿದ್ದರು.

ವಿಜಯ ಆಳವಾಗಿ ಚಿಂತಿಸತೊಡಗಿದ ತನ್ನ ಬಾಳಿನ ಚಕ್ರ, ಈ ತರಹ ತಿರುಗುತ್ತೆಂದೂ ಅವನು ಕನಸಿನಲ್ಲೂ ಭಾವಿಸಿರಲಿಲ್ಲ, ವಿಧಿಯ ಆಟವನ್ನು ತಿಳಿಯಲು ಅವನು ಅಸಮರ್ಥನಾಗಿದ್ದ. ಮರಣೋನ್ಮುಖನಾಗಿದ್ದ ಸ್ನೇಹಿತನಿಗೆ ವಚನಕೊಟ್ಟಿದ್ದ. ಅವನಿ





ಗರಿವಿಲ್ಲದೆಯೇ, 'ನನಗಾಗಿ ನೀನು ಬದುಕಬೇಕು' ಎಂದಿದ್ದ ಆದರೆ? ತನ್ನದಾದರೋ ದೊಡ್ಡ ಕುಟುಂಬ, ತಾನು ಹಿರಿಯ ಮಗ ತನ್ನ ಜವಾಬ್ದಾರಿ ದೊಡ್ಡದು. ಎಷ್ಟೆ ಮುಂದುವರಿದಿದ್ದರೂ ಸಮಾಜ ಕ್ಷುಲ್ಲಕ ವಿಷಯಕ್ಕೆ ಬೇಕಾದಷ್ಟು ಪ್ರೋತ್ಸಾಹ ಕೊಡುತ್ತದೆ. ಆದರೆ ಯಾರಿಗಾದರೂ ಒಂದು ಒಳ್ಳೆಯ ಮಾರ್ಗವನ್ನು ತೋರಿದಲ್ಲಿ, ಅಂದರೆ ಚಿಕ್ಕ ವಯಸ್ಸಿನ ಬಾಲವಿಧವೆಯರನ್ನು ಯುವಕರು ಅವರ ಮುರಿದ ಬಾಳಿಗೆ ಮತ್ತೆ ಚೇತನವನ್ನು ಕೊಟ್ಟು ಅವರನ್ನು ಮದುವೆಯಾಗಲು ಇಷ್ಟಪಟ್ಟರೆ, ಅವರಿಗೆ ಸಮಾಜದಲ್ಲಿ ಸ್ಥಾನವಿಲ್ಲ.

ಈ ಬಗ್ಗೆ ಕಾಲೇಜಿನಲ್ಲಿದ್ದಾಗ ಅನೇಕವೇಳೆ ವಾದಿಸಿಯೂ ಇದ್ದ. ಆದರೆ ಅದಕ್ಕೆ ಉದಾಸೀನವೇ ಹೆಚ್ಚಾಗಿ ಪ್ರೋತ್ಸಾಹ ಸಿಕ್ಕಿರಲಿಲ್ಲ. ಈಗ ಈ ಸಮಸ್ಯೆಗೆ ತಾನೇ ಸಿಲುಕಿಕೊಳ್ಳಬೇಕಾಗಿದೆ. ಸೋದರಿಯರ ವಿವಾಹ ನಡೆಯಬೇಕು, ತಂದೆಯವರಿಗೆ ಸದಾ ಮುಂಗೋಪ, ತಮ್ಮಂದಿರ ವಿದ್ಯಾಭ್ಯಾಸ ಪೂರ್ತಿಯಾಗಬೇಕು, ತನ್ನನ್ನೇ ನಂಬಿರುವ ತಾಯಿ, ತಮ್ಮ ಜೀವನದಲ್ಲಿ ಸಾಕಷ್ಟು ಕಷ್ಟಗಳನ್ನು ಪಟ್ಟು ಸಂಸಾರಭಾರದಿಂದ ಹಣ್ಣಾಗಿದ್ದರು. ಜೊತೆಗೆ ಹೆಣ್ಣುಮಕ್ಕಳು ಒಬ್ಬರಿಗಿಂತ ಒಬ್ಬರು ಬೆಳೆಯುತ್ತಿದ್ದರು. ಮೇಲಾಗಿ ಗಂಡು ದಿಕ್ಕಿಲ್ಲದ ಉಷೆಯ ಮುಂದಿನ ಭವಿಷ್ಯವೇನು? ಅದೂ ಈ ಕಾಲದಲ್ಲಿ ಪುಂಡರಿಗೆ ಇಂತಹ ವಿಷಯ ಒಂದು ಸದವಕಾಶ, ಅಥವಾ ಒಂದು ಮನೆಯಲ್ಲಿ ನಾವು ಬಾಳುವೆ ಮಾಡಿದರೆ, ಅದಕ್ಕೂ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ ಹೇಗಿದ್ದರೂ ಈ ಸಮಾಜದಲ್ಲಿ ಬಾಳುವೆ ಮಾಡುವುದು ಕಷ್ಟ. ಉಳಿದಿರುವ ಹಾದಿ ಎಂದರೆ ಉಷಳನ್ನು ಒಪ್ಪಿಸಿ, ಧೈರ್ಯದಿಂದ ಮದುವೆಯಾಗುವುದೇ ಸರಿಯಾದ ಏಕೈಕ ಮಾರ್ಗ, ಆದರೆ? ಈ ಸಮಸ್ಯೆಯನ್ನು ಹೇಗೆ ತಾಯಿಯ ಮುಂದಿಡಲಿ ಎಂದು ಚಿಂತಿಸಿದ. ರಾತ್ರಿ ಎಲ್ಲಾ ನಿದ್ದೆಯಿಲ್ಲದೆ ಕಣ್ಣುಗಳು ಕೆಂಡದುಂಡೆಗಳಾಗಿದ್ದವು.

ಅಂದಿನಿಂದ ಸರಿಯಾಗಿ ಊಟವೇ ಮಾಡುತ್ತಿರಲಿಲ್ಲ. ಸದಾ ಚಿಂತೆಯಲ್ಲಿ ಮುಳುಗಿರುತ್ತಿದ್ದ ಅಣ್ಣನನ್ನು ನೋಡಿ, ಶೇಖರನಿಗೆ ಹೆದರಿಕೆಯಾಗುತ್ತಿತ್ತು. ಅಣ್ಣನ ಮನಸ್ಸಿನಲ್ಲಿ ಆಗುತ್ತಿದ್ದ ಆಂದೋಲನ ಅವನಿಗೆ ತಿಳಿದಿತ್ತು. ಹೀಗೆಯೇ ಬಿಟ್ಟರೆ, ಅನಾಹುತಕ್ಕೆ ಎಡೆಕೊಟ್ಟಂತಾಗುವುದೆಂದು ಭಾವಿಸಿ, ವಿಜಯನಿಗೆ ಹೇಳಿದ. "ಅಣ್ಣಾ, ನಾನು ಈ ದಿನ ಊರಿಗೆ ಹೋಗಿ ಬರುತ್ತೇನೆ, ಎಂದು ಕ್ಷಣಕಾಲ ಯೋಚಿಸಿ ಶೇಖರನಿಗೆ ಹೇಳಿದ, ವಿಜಯ ಸರಿ ಹಾಗೇ ಮಾಡು, ನಾಳೆಯೇ ಬಂದುಬಿಡು, ಬರುವಾಗ ಅಮ್ಮನನ್ನೂ ಕರೆದುಕೊಂಡು ಬಾ ಎಂದ.

ಊರಿನಲ್ಲಿ ತಾಯಿಯೊಂದಿಗೆ ವಿಷಯವೆಲ್ಲಾ ತಿಳಿಸಿದ ಶೇಖರ. ವಿಷಯ ತಿಳಿದ ಶ್ರೀದೇವಮ್ಮ ಮಮ್ಮಲ ಮರುಗಿದರು. ಹೋಗಿ ನಾಲ್ಕು ಸಮಾಧಾನದ ಮಾತುಗಳನ್ನಾದರೂ ಉಷೆಗೆ ಹೇಳಿಬರಬೇಕೆಂದುಕೊಂಡರು. ಹೇಗೂ ವಿಜಯ ಬರಹೇಳಿದ್ದಾನೆ, ಒಂದು ದಿನದ ಮಟ್ಟಿಗೆ, ಹೋಗಿಬರೋಣ ಎಂದುಕೊಂಡರು. ಪಶುಪತಯ್ಯನವರು

ಬರುವುದನ್ನೇ ಕಾದು ಕುಳಿತರು, ಮಗಳಿಗೆ ನಾಳೆಯ ಅಡುಗೆಯ ವಿವರಣೆ ಹೇಳಿದರು. ಮಕ್ಕಳಿಗೆ ಗಲಾಟೆ ಮಾಡಬೇಡಿ, ಬರುವಾಗ ನಿಮಗೆ ತಿಂಡಿತರುವೆ ಎಂದು ಹೇಳಿ, ಪತಿಯು ಬಂದನಂತರ, ವಿಜಯನಿಗೆ ಮೈಸರಿಯಿಲ್ಲವಂತೆ, ಹೋಗಿ ನೋಡಿಕೊಂಡು ನಾಳೆ ಬರುತ್ತೇನೆ, ಎಂದರು ಶ್ರೀದೇವಮ್ಮ. ಪಶುಪತಯ್ಯನವರು ಸರಿ, ಹೋಗಿ ಬಾ. ಎನ್ನಲು ಶೇಖರನೊಡನೆ ಬೆಂಗಳೂರಿಗೆ ಹೊರಟುಬಂದರು.

ಉಷಳ ಕಂಗೆಟ್ಟ ಮುಖನೋಡಿದ ಶ್ರೀದೇವಮ್ಮ ನೊಂದು ನುಡಿದರು. 'ನಮ್ಮ ಕೈಯಲ್ಲೇನಿದೆ ಮಗು, ಇದೆಲ್ಲಾ ವಿಧಿಯ ಲೀಲೆ, ಬಂದದ್ದನ್ನು ಅನುಭವಿಸಬೇಕಲ್ಲವೆ? ನಾವೆಲ್ಲ ನಿನ್ನ ಪಾಲಿಗಿರುವಾಗ, ನೀನು ನಡೆದದ್ದನ್ನು ಮರೆತು, ಅದಷ್ಟು ಸೈರಿಸಿಕೋ, ತಾಯಿ ಎಂದರು. ಉಷಳಿಗೆ ತಾಯಿಯ ನೆನಪು ಬಂದು, ಅವರ ಎದೆಯಲ್ಲಿ ಮುಖ ವಿಟ್ಟು ರೋಧಿಸತೊಡಗಿದಳು. ಅಳಬೇಡಮ್ಮ ಉಷಾ, ಇಂದಿನಿಂದ ನೀನು ನಗುತ್ತಾ ಕಾಲಕಳೆಯಬೇಕು, ಬಂದ ಕಷ್ಟಗಳನ್ನು ಎದುರಿಸಿ ನಿಲ್ಲುವುದೇ ಮಾನವತೆಯ ಧೀರೋದಾತ್ತ ನಡೆ, ಅದು ಬಿಟ್ಟು ಹೀಗೆ ಚಿಂತಿಸುತ್ತಾ ಇದ್ದರೆ ಅದರಿಂದ ಯಾವ ಪುರುಷಾರ್ಥವೂ ಆಗುವುದಿಲ್ಲ? ಮುಂದಿನ ನಿನ್ನ ಆದರ್ಶ ಬಾಳಿನ ಕಡೆಗೆ ಗಮನಕೊಡು, ಎಂದು ಹೇಳಿ ತಾವು ತಂದಿದ್ದ ಹಣ್ಣು ಹೂ ಕೊಟ್ಟರು.

ಅಷ್ಟರಲ್ಲಿ ಹೊರಗೆ ಹೋಗಿದ್ದ ವಿಜಯ ಮನೆಗೆ ಬಂದ, ತಾಯಿಯನ್ನು ನೋಡಿ, ಈಗ ಬಂದ್ಯಾಮ್ಮ, ಮನೆಯಲ್ಲಿ ಎಲ್ಲರೂ ಚೆನ್ನಾಗಿದ್ದಾರ? ಎಂದು ಕೇಳಿದ. ಹೌದಪ್ಪ, ಎಲ್ಲರೂ ಚೆನ್ನಾಗಿದ್ದಾರೆ, ಆದರೆ ನೀನೇಕೆ ಹೀಗಿರುವೆ, ಮೈ ಸರಿಯಿಲ್ಲವೆ? ಸ್ವಲ್ಪದಿನ ಊರಲ್ಲಿದ್ದು ಆರೈಕೆ ಮಾಡಿಕೊಂಡು ಬರಬಹುದಲ್ಲ? ಎಂದರು. ಮಗನ ಮುಖ ಖಾಯಿಲೆ ಬಿದ್ದವರಂತಿತ್ತು ಕಣ್ಣುಗಳು ಆಳಕ್ಕಿಳಿದಿದ್ದವು, ಯಾವುದೋ ಚಿಂತೆ ಮುಖದಲ್ಲಿ ತಾಂಡವವಾಡುತ್ತಿತ್ತು. "ನನಗೇನೂ ಆಗಿಲ್ಲಮ್ಮ, ಸುಮ್ಮನೆ ನೀನು ಗಾಬರಿಪಡುತ್ತಿರುವೆ? ಎಂದ ವಿಜಯ.

ತಾಯಿ ಮಗ ಇಬ್ಬರೂ ಉಷಾ ತಂದಿತ್ತ ತಿಂಡಿ ಕಾಫಿ ತೆಗೆದುಕೊಂಡರು. ನಂತರ ತಾಯಿಯನ್ನು ಕುರಿತು ಹೇಳಿದ, 'ಅಮ್ಮ ನಿನ್ನ ಬಳಿ ಸ್ವಲ್ಪ ಮಾತಾಡುವುದಿದೇ ಹೊರಗೆ ಹೋಗಿಬರೋಣ ಬಾ ಎಂದ ವಿಜಯ. ಸರಿ ನಡೆಯಪ್ಪ, ಎಂದರು ಶ್ರೀದೇವಮ್ಮ, ತರಕಾರಿ ಬೇಕಿದ್ದರೆ ತಂದುಕೊಡು ಎಂದು ಶೇಖರನ ಕೈಗೆ ಹಣಕೊಟ್ಟ. ನೀನು ಅಡುಗೆ ಮಾಡುವಷ್ಟರಲ್ಲಿ ನಾವು ಬರುತ್ತೇವೆ, ಎಂದು ಉಷಾಳಿಗೆ ಹೇಳಿ ಹೊರಟರು.

ಒಂದು ಪಾರ್ಕಿಗೆ ಕರೆದೊಯ್ದು ನಿರ್ಜನವಾದ ಸ್ಥಳದಲ್ಲಿ ತಾಯಿಯನ್ನು ಕುಳ್ಳಿರಿಸಿ ತಾನೂ ಕುಳಿತ. ಇದುವರೆವಿಗೂ ನಡೆದ ಎಲ್ಲ ವಿಷಯವನ್ನೂ ತಿಳಿಸಿ, 6 ತಿಂಗಳಲ್ಲೇ ತನ್ನವರನ್ನೆಲ್ಲಾ ಕಳೆದುಕೊಂಡು ಶಿಕ್ಷಕರಿಲ್ಲದೆ ಅನಾಥಳಾದ ಉಷಳ ಗತಿ ಏನು?



ಹಾಗು ತನ್ನ ಗೆಳೆಯನ ಅಂತಿಮ ಕೋರಿಕೆಯನ್ನು ತಾನು ನೆರವೇರಿಸಲೇಬೇಕಾಗಿದೆ. ಇದಕ್ಕೆ ನೀವೇ ದಾರಿತೋರಿಸಿ, ನನಗಂತೂ ಇದೇ ಚಿಂತೆಯಾಗಿದೆ? ಎಂದ.

ಶ್ರೀದೇವಮ್ಮನವರಿಗೂ ಪರಿಸ್ಥಿತಿಯ ಅರಿವಾಗಿತ್ತು. ತನ್ನ ಮಗಳಿಗೇ ಈ ಗತಿಯಾಗಿದ್ದರೆ? ಆಗ ಅವಳ ಬಾಳು ಎಷ್ಟು ದುರ್ಭರವಾಗುತ್ತಿತ್ತು? ಹೆಣ್ಣು ಹೆತ್ತ ಆಕೆಯ ಹೃದಯ ಕೇವಲ ಬರೀ ಊಹೆಯಿಂದಲೇ ಅವರ ಹೃದಯ ನಡುಗಿತು. ಉಷಳ ಬಗ್ಗೆ ಆಕೆಯು ವಿಚಾರಮಾಡಿದರು. 'ಮಗನ ಮನಸ್ಸಿನಲ್ಲಿ ಏನಿದೆಯೋ? ಎಂದು ತಿಳಿಯಬಯಸಿ ಮಗನನ್ನು ಕೇಳಿದರು, ನೋಡು ವಿಜಯ, ಇದರಲ್ಲಿ ಮುಚ್ಚುಮರೆ ಬೇಕಿಲ್ಲ, ಈ ವಿಷಯದಲ್ಲಿ ನಿನ್ನ ಆಲೋಚನೆ ಏನಿದೆ? ಸ್ಪಷ್ಟವಾಗಿ ಹೇಳು' ಎಂದರು.

ಅಮ್ಮ, ನನಗೆ ಮನೆಯೋಚನೆ ಇಲ್ಲವೆಂದು ತಪ್ಪಾಗಿ ಭಾವಿಸಬೇಡ, ತಂಗಿಯರಿಬ್ಬರ ಮದುವೆ, ತಮ್ಮಂದಿರ ಓದು ಮುಂದುವರಿದು ಮುಗಿಯಬೇಕು, ನಿನ್ನ ಬಾರವೂ ಇಲ್ಲದಂತಾಗಬೇಕು, ಹಾಗೂ ಉಷಳ ವಿದ್ಯಾಭ್ಯಾಸವೂ ಮುಗಿಯಬೇಕು, ಆನಂತರವೇ ನನ್ನ ಬಾಳನ್ನು ಉಷಳೊಡನೆ ರೂಪಿಸಿಕೊಳ್ಳುತ್ತೇನೆ, ನಿನ್ನ ಮಗನಲ್ಲಿ ನಂಬಿಕೆಯಿಡು ಎಂದ. ಅವನ ಮಾತು ಅವರನ್ನು ಕೆಲಕಾಲ ಮೂಕರನ್ನಾಗಿಸಿತು.

ಸಮಾಜವನ್ನು ಹೇಗೆ ಎದುರಿಸಲಿ, ಇದರ ಬಗ್ಗೆ ಪತಿಯು ಏನನ್ನುವರೋ? ಎಂದು ಚಿಂತಿಸಿದರೂ, ಸಮಾಜದ ಭಯಕ್ಕೋಸ್ಕರ ಒಬ್ಬ ಹೆಣ್ಣುಮಗಳ ಬಾಳು ಮಣ್ಣುಗೂಡಬೇಕೆ? ಹಾಗೂ ತನ್ನ ಮಗನ ಜೀವನ ಬರೀ ಕೊರಗಿನಿಂದಲೇ ಉಳಿಯಬೇಕೆ ಅವನ ಆದರ್ಶ ನುಚ್ಚುನೂರಾಗಿ ನಿರಾಶೆಯ ಮಡುವಿನಲ್ಲಿ ಅವನನ್ನು ತಳ್ಳಬೇಕೆ? ದೈವಸಂಕಲ್ಪ ಹೀಗೆ ಇದ್ದರೆ ಅದನ್ನು ತಪ್ಪಿಸಲು ನಾನೇಕೆ ಪ್ರಯತ್ನಪಡಲಿ? ಕಡೆಗೆ ಅವರ ಮಾತೃಹೃದಯವೇ ಗೆದ್ದಿತು. ಇದಕ್ಕೋಸ್ಕರ ಏನೇ ತೊಂದರೆ ಬಂದರೂ, ಧೈರ್ಯದಿಂದ ಎದುರಿಸಬೇಕಲ್ಲದೆ ಬರೀ ಆಲೋಚನೆ ಮಾಡುವುದು ಸರಿಯಲ್ಲ ಎಂದುಕೊಂಡು, ಹೇಳಿದರು "ದೇವರು ಮಾಡಿದಂತಾಗಲಿ, ನೀನು ಹೇಳಿದಂತೆ ಮಾಡುವುದೇ ಸೂಕ್ತ" ಎಂದು ನನಗನ್ನಿಸಿದೆ. ನಿನ್ನ ಚಿಂತೆ ಬಿಡು. ದೇವರ ಮೇಲೆ ಭಾರ ಹಾಕಿ ಏನು ಬಂದರೂ ಎದುರಿಸಿ ಮುಂದುವರಿಯೋಣ ನಿನ್ನ ಚಾರಿತ್ರ್ಯದ ಬಗ್ಗೆ ನನಗೆ ಸಂತೋಷದ ಸಂಪೂರ್ಣ ಭರವಸೆ ಇದೆ, ಎಂದರು.

ತಾಯಿಯ ಕೈಹಿಡಿದು ನಮಸ್ಕರಿಸಿ ಹೇಳಿದ ವಿಜಯ, ನೀನು ಸಂದೇಹಪಡಬೇಕಾದ ಪ್ರಮೇಯವೇ ಇಲ್ಲವಲ್ಲ,' ಎಂದ ಮಗನ ಮಾತಿಗೆ ಹರ್ಷಗೊಂಡರು.

ಇನ್ನು ಹೊತ್ತಾಯಿತು ಮನೆಗೆ ಹೋಗೋಣ, ನಾನು ಇಂದು ಸಂಜೆಯಲ್ಲಿ ಊರಿಗೆ ಹೋಗಬೇಕಾಗಿದೆ ಎಂದರು ಶ್ರೀದೇವಮ್ಮ. ಮನೆಗೆ ಹಿಂತಿರುಗಿ ಬಂದರು ಊಟ ಮುಗಿಸಿ ತಾಯಿಮಕ್ಕಳು ಮಾತನಾಡುತ್ತ ಕುಳಿತರು. ವಿಜಯನ ಮುಖ ಮೋಡಸರಿದ ಚಂದ್ರನಂತಾಗಿತ್ತು ಮನದ ಚಿಂತೆಯ ಭಾರದ ಹೊರೆ ಇಳಿದಿತ್ತು. ತನ್ನ

ತಾಯಿಯಂತೆ ಇತರರೂ ತಮ್ಮ ಸಹೃದಯತೆ ತೋರಿದರೆ ನಮ್ಮ ಸಮಾಜ ಉದ್ಧಾರವಾಗುವುದರಲ್ಲಿ ಸಂಶಯವೇ ಇಲ್ಲ, ಎಂದುಕೊಂಡ.

ಮಗನ ಉಲ್ಲಸಿತ ಮುಖ ನೋಡಿ ತಾಯಿಗೂ ಸಮಾಧಾನವಾಗಿತ್ತು. ಅಲ್ಲಿಗೆ ಬಂದು ನಿಂತ ಉಷಳನ್ನು ತಮ್ಮ ಬಳಿಯಲ್ಲೇ ಕುಳ್ಳಿರಿಸಿಕೊಂಡರು. ಅವಳ ಕಾಲೇಜಿನ ವಿಷಯಗಳನ್ನು ಕೇಳಿ ತಿಳಿದುಕೊಂಡರು. ಹೆಚ್ಚಿನ ಗಮನಕೊಟ್ಟು ಓದುವಂತೆ ಹೇಳಿದರು. ಮಗನ ಕಡೆ ತಿರುಗಿ ಹೇಳಿದರು, ವಿಜಯ ನಿನ್ನ ರೂಮು ಖಾಲಿ ಮಾಡಿ ಇಲ್ಲೇ ಇರುವುದು ಒಳ್ಳೆಯದು, ಗಂಡು ದಿಕ್ಕಿಲ್ಲವೆಂದು ತಿಳಿದರೆ ಪೋಲಿಗಳು ಇಲ್ಲದ ಕಿರುಕುಳ ಕೊಡುತ್ತಾರೆ ಉಷಳಿಗೂ ಒಬ್ಬಳಿಗೇ ಇರಲು ಹೆದರಿಕೆಯಾಗಬಹುದು ಎಂದರು. ತಾಯಿಯ ಮುಂದಾಲೋಚನೆಗೆ ವಿಜಯ ತಲೆದೂಗಿದ.

"ಅಮ್ಮಾ ನನಗೊಂದು ಯೋಚನೆ, ಇಬ್ಬರು ತಂಗಿಯರನ್ನೂ ಇಲ್ಲಿಗೇ ಏಕೆ ತಂದು ಇರಿಸಿಕೊಳ್ಳಬಾರದು? ಉಷೆಗೂ ಸಹ ಜೊತೆಯಾಗುತ್ತದೆ, ಇಲ್ಲಿಯೇ ಶಾಲೆಗೆ ಸೇರಿಸೋಣ ಒಬ್ಬಳೇ ಇದ್ದರೆ ಊಟ ತಿಂಡಿಯ ಪರಿವೆಯೇ ಉಷಾಗಿರುವುದಿಲ್ಲ ಎಂದ, ಒಪ್ಪುವರೋ ಇಲ್ಲವೋ ಎಂಬ ಆತಂಕದಿಂದ. ಶ್ರೀದೇವಮ್ಮನವರನ್ನು ನೋಡಿದಳು ಉಷೆ, "ಆಗಲಿ ನಿಮ್ಮ ತಂದೆಯವರನ್ನು ಒಪ್ಪಿಸಿ ಕಳುಹಿಸುತ್ತೇನೆ, ಅದೂ ಒಂದು ಒಳ್ಳೆಯ ಸಲಹೆ, ಎಂದರು. ಸ್ವಲ್ಪಹೊತ್ತು ವಿಶ್ರಮಿಸಿಕೊಂಡು, ಊರಿಗೆ ಹೊರಡಲು ಸಿದ್ಧರಾದರು. ತಂಗಿಯರಿಗೆ ತಿಂಡಿ ಪೊಟ್ಟಣ ಕಟ್ಟಿಸಿಕೊಂಡು ಬಂದು ವಿಜಯ ಬ್ಯಾಸ್ಕೆಟ್ಟಿನಲ್ಲಿಟ್ಟ.

ಹೊರಟುನಿಂತ ಶ್ರೀದೇವಮ್ಮನವರ ಕಾಲಿಗೆರಗಿದಳು ಉಷೆ. 'ಸೌಭಾಗ್ಯವತಿಯಾಗು' ಎಂದು ಹರಸಿದರು. ಹಾಗೆಂದು ಹರಸಿದ ಪುಣ್ಯ ನಿಮ್ಮದಾಗಲಿ ಎಂದಳು ಉಷ. ಎಲ್ಲರ ಚಿಂತೆಯೂ ದೂರವಾಗಿತ್ತು, ಉಷ, ಶೇಖರ, ವಿಜಯ ಮೂವರೂ ಶ್ರೀದೇವಮ್ಮನವರನ್ನು ಕರೆದುಕೊಂಡು ಬಸ್ ನಿಲ್ದಾಣಕ್ಕೆ ಬಂದರು. ಆ ವೇಳೆಗೆ ಬಸ್ ಹೊರಟು ನಿಂತಿತ್ತು. ತಾಯಿಯನ್ನು ಬಸ್ಸಿನಲ್ಲಿ ಕುಳ್ಳಿರಿಸಿ ಹೊರಡುವವರೆವಿಗೂ ನಿಂತಿದ್ದು ಮನೆಗೆ ಹೊರಟರು. ಉಷೆಯ ಮನವು ಶ್ರೀದೇವಮ್ಮನವರ ಉದಾತ್ತತೆಯನ್ನು ಕಂಡು ಹರ್ಷಿಸುತ್ತಿತ್ತು.

(ಮುಗಿಯಿತು)

---

## ಶ್ರದ್ಧಾಂಜಲಿ

ಶ್ರೀ ಕ್ಷೇತ್ರದ ಆಸ್ತಿಯೆಂದರೆ ಕೊಡುಗೈ ಧಾನಿಗಳಾದ ಭಕ್ತರೆ. ದೈವಭಕ್ತರ ಉದಾರಿಗಳ ಕೊಡುಗೈಯಿಂದ ಶ್ರೀ ಕ್ಷೇತ್ರದ ದಾಸೋಹ ನಿರಾಂತಕವಾಗಿ ನಡೆಯುತ್ತಿದೆ.

ಬೆಂಗಳೂರು ರಾಜಾಜಿನಗರದ 5ನೇ ಬಡಾವಣೆಯಲ್ಲಿ ವಾಸವಾಗಿದ್ದ ಶ್ರೀಮತಿ ಶಿವಮ್ಮನವರು ಉದಾರಿಗಳಾಗಿ, ದೈವಭಕ್ತರಾಗಿ, ಕೊಡುಗೈಧಾನಿಗಳಾಗಿ ಬಾಳಿಬೆಳಗಿದವರು. ಶ್ರೀಮಠದ ಅಚ್ಚುಮೆಚ್ಚಿನ ಭಕ್ತರಾಗಿ ಅನೇಕ ವಿಧದಲ್ಲಿ ಮಠಕ್ಕೆ ಸಹಾಯ ಮಾಡಿರುತ್ತಾರೆ. ಇಂತಹ ಭಕ್ತ ಭಾಂದವರಾದ ಶ್ರೀಮತಿ ಶಿವಮ್ಮನವರು ಶಿವೈಕ್ಯರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಇವರ ಆತ್ಮಕ್ಕೆ ಶಾಂತಿ ದೊರಕಲೆಂದು 'ಸಿದ್ಧಗಂಗಾ' ತನ್ನ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.



ಓದು' ಎಂಬ ಧೋರಣೆ ಬಿಟ್ಟ ವಿಷಫಲವಿದು. ಅದರಲ್ಲಿಯೂ ಶಿಕ್ಷಣ ರಂಗದಲ್ಲಿ ಈ ರೀತಿಯಾದರೆ ದೇವರೇ ಕಾಪಾಡಬೇಕು. ಪರೀಕ್ಷೆಯಲ್ಲಿ ಪಾಸುಮಾಡಿ ಬಂದ ತಾನು ಸರ್ವಜ್ಞ, ಎದುರಿಗಿರುವವನು ದಡ್ಡರೆಂಬ ಕಲ್ಪನೆಯಾಗಲೀ, ಪಾಸುಮಾಡಿದ ಮೇಲೆ ಇನ್ನೇಕೆ ಅಭ್ಯಾಸ ಎಂಬ ಮನೋಭಾವವನ್ನಾಗಲೀ ತಳೆದ ಅಧ್ಯಾಪಕ ಎಷ್ಟು ಅಪಾಯಕಾರಿ ಎಂಬುದನ್ನು ಊಹಿಸಿದರೇ ದಿಗಿಲಾಗುತ್ತದೆ. ಶಿಕ್ಷಕ ಬಾಳಿನ ನಿರಂತರ ವಿದ್ಯಾರ್ಥಿಯಾಗಬೇಕಾದ್ದು ಅವಶ್ಯ. ತಾನು ಕಲಿತದ್ದಕ್ಕೆ, ಗಳಿಸಿಕೊಡ ಜ್ಞಾನರಾಶಿಗೆ ಹೊಸ ಹೊಸ ಚಿಂತನಗಳಿಂದ ಹೊರಬೀಳುವ ಹೊಸ ಹೊಸ ಅವಿಷ್ಕಾರಗಳನ್ನು ಸೇರಿಸಿಕೊಂಡು ತನ್ನ ಜ್ಞಾನಕ್ಕೆ ತಾಜಾತನವನ್ನು ದೊರಕಿಸಿಕೊಳ್ಳಬೇಕು. ಕಲಿಯುವ ಆಸಕ್ತಿ, ಶ್ರದ್ಧೆಗಳನ್ನು ಚುರುಕಾಗಿಸಿಕೊಂಡರೆ, ಕಲಿಸುವ ಸಾಮರ್ಥ್ಯ ತಾನಾಗಿಯೇ ಉತ್ತಮಗೊಳ್ಳುತ್ತದೆ; ಸತ್ವಪೂರ್ಣವಾಗುತ್ತದೆ. ನಾವು ಆ ಹಿಂದೆ ಎಂದೋ ಓದಿದ ವಿಜ್ಞಾನ, ಇತಿಹಾಸಕ್ಕೂ ಇವೊತ್ತು ಹೊಸ ಸಂಶೋಧನೆಗಳಿಂದ ಬೆಳೆದುನಿಂತ ವಿಜ್ಞಾನ ಇತಿಹಾಸಗಳಿಗೂ ವ್ಯತ್ಯಾಸವಿದೆ. ದಿನೇ ದಿನೇ ಜ್ಞಾನದ ಕ್ಷಿತಿಜ ವಿಸ್ತಾರವಾಗುತ್ತಿದೆ. ಇಂಥ ಹೊಸ ಹೊಸ ವಿಚಾರಗಳನ್ನೂ ಮೈಗೂಡಿಸಿಕೊಂಡವನ ಹೆಸರಿನ ಮುಂದಿರುವ ಪದವಿ ಸೂಚಕ ಅಕ್ಷರಗಳು ಅರ್ಥಪೂರ್ಣವೆನಿಸುತ್ತವೆ. ಆದರೆ ಪರಿಕ್ಷೆಗಾಗಿ ಓದಿ, ನಂತರ ಆ ಕಡೆ ಕುರುಡಾಗಿ ಬಾಳುವವನ ಹೆಸರಿನ ಮುಂದಿನ ಆ ಅಕ್ಷರಗಳು ಅರ್ಥಹೀನವೆನಿಸುತ್ತವೆ.

ಒಂದು ಮರ ಹೂ ಬಿಡುತ್ತದೆ, ತನಗೆ ತಾನೇ ಅಲಂಕರಿಸಿಕೊಂಡಂತೆ. ಆ ಹೂಗಳು ಆ ಗಿಡದ ಅಂತಸ್ಸತ್ವದ ಪ್ರತೀಕ. ನೆಲದಲ್ಲಿನ ಸಾರವನ್ನು ಹೀರಿ ಕೊಬ್ಬಿ ಬೆಳೆದ ಮರ ಚಿಗುರಿ, ಅನಂತರ ಮೈತುಂಬ ಹೂವರಳಿಸಿಕೊಂಡು ನಗುತ್ತಿದೆ. ಆ ಹೂಗಳು ಯಾರೋ ಅದಕ್ಕೆ ತಂದು ಅಂಟಿಸಿದ್ದಲ್ಲ; ಸ್ವಾಭಾವಿಕವಾದವು. ಅದೇ ನಾವು ಮಾಡಿಕೊಳ್ಳುವ ಅಲಂಕಾರ, ತೊಡುವ ವಸ್ತ್ರಾಭರಣಗಳು ತಂದು ಹಾಕಿಕೊಂಡವು, ಕೃತಕವಾದವು. ಅದಕ್ಕೆ ಡಿ.ವಿ.ಜಿ. ಹೀಗೆಂದಿದ್ದಾರೆ :

ಪುಸ್ತಕದಿ ದೊರೆತರಿವು ಮಸ್ತಕದಿ ತಳೆದ ಮಣಿ
ಚಿತ್ತದೊಳು ಬೆಳೆದರಿವು ತರುತಳೆದ ಪುಷ್ಪ.

ಪದವೀಧರ ತನ್ನ ಹೆಸರ ಮುಂದೆ ಸೇರಿದ ಪದವಿಸೂಚಕ ಅಕ್ಷರಗಳು ಮರ ಹೂ ಬಿಟ್ಟಷ್ಟೇ ಸ್ವಾಭಾವಿಕವಾಗಬೇಕಾದರೆ ಅಧ್ಯಯನ ಶೀಲನಾಗಬೇಕು. ಚಿತ್ತದಲ್ಲಿ ಅರಿವು ಬೆಳೆಯಲು ಅನುವುಮಾಡಿಕೊಳ್ಳಬೇಕು. ತನ್ನ ಕಲಿಕೆ ಕ್ರಿಯಾತ್ಮಕವಾಗುವಂತೆ, ಹರಿವ ನೀರಂತೆ ನಿತ್ಯನೂತನವಾಗುವಂತೆ ನಡೆದುಕೊಳ್ಳಬೇಕು. ಇಲ್ಲದಿದ್ದರೆ ಆ ಅಕ್ಷರಗಳು ಹೊರಗಿಂದ ತಂದು ತಗುಲಿಸಿದ ತೇಪೆಯಾಗುತ್ತವೆ. ಅವು ಯಾವಾಗಲಾದರೂ ಬಿದ್ದುಹೋಗಬಹುದು. ಆದ್ದರಿಂದ ಪದವೀಧರರು ಈ ಹೊಣೆಗಾರಿಕೆಯನ್ನು ಅರಿತಿರಬೇಕಾದುದು ಅವಶ್ಯಕ. ●

ವಿಷಯವನ್ನು ಸಂಘದ ಸಹಕಾರ್ಯದರ್ಶಿ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ಸಭೆಯ ಮುಂದಿಟ್ಟರು. ಸಭೆಯು ಕೆಲವು ಬದಲಾವಣೆಯೊಂದಿಗೆ ಅಂಗೀಕರಿಸಿತು. ಹಿಂದಿನ ಸಭೆಯ ನಿರ್ಣಯದಂತೆ ಹಳೆಯ ವಿದ್ಯಾರ್ಥಿಗಳು ತಮ್ಮ ತಿಂಗಳ ಅರ್ಧ ಆದಾಯವನ್ನು ಸಮಾರಂಭಕ್ಕಾಗಿ ಕೊಡುವ ನಿರ್ಣಯದಂತೆ ಪೂರ್ಣ ಕೊಟ್ಟಿರುವವರಿಗೆ ಅಭಿನಂದನೆ ತಿಳಿಸಿ, ಉಳಿದವರನ್ನು ಕಂತುಗಳ ಪೂರ್ಣ ಮಾಡಲು ಜ್ಞಾಪಕ ಪತ್ರ ಬರೆಯಲು ತೀರ್ಮಾನಿಸಿತು. ಸಂಘದ ಪ್ರಧಾನ ಕಾರ್ಯದರ್ಶಿಯವರಾದ ಶ್ರೀ ಎಂ. ಎನ್. ಚನ್ನಬಸಪ್ಪನವರು ಸಮಾರಂಭ ನಡೆಯುವ ಸಂದರ್ಭದಲ್ಲಿ ಮತ್ತು ಅದಕ್ಕೂ ಮುಂಚೆ ಶ್ರೀ ಕ್ಷೇತ್ರಕ್ಕೆ ಎಲ್ಲ ಹಳೆಯ ವಿದ್ಯಾರ್ಥಿಗಳು ಬಂದು ಸ್ವಯಂ ಸೇವಕರಾಗಿ ಸೇವೆಸಲ್ಲಿಸಬೇಕೆಂದು ಸಭೆಯನ್ನು ಪ್ರಾರ್ಥಿಸಿದರು. ಸಭೆಯಲ್ಲಿ ಹಾಜರಿದ್ದ ಕೆಲವು ಹಳೆಯ ವಿದ್ಯಾರ್ಥಿಗಳು ಮತ್ತು ಮಠಾಧಿಪತಿಗಳು ಸಮಾರಂಭಕ್ಕಾಗಿ ವಾಗ್ದಾನವನ್ನು ಮಾಡಿದರು. ಶ್ರೀಮಾನ್ ಚನ್ನಪ್ಪ ಎರೇಸೀಮೆಯವರು ಮಾತನಾಡುತ್ತಾ ಶ್ರೀ ಸಿದ್ಧಗಂಗಾ ಕ್ಷೇತ್ರವು ಬೃಹತ್ ದಾಸೋಹ ಕೇಂದ್ರವೆಂಬುದು ಲೋಕವಿದಿತವಾದ ವಿಷಯ. ಕ್ಷೇತ್ರದಲ್ಲಿ ಮಾಡುವ ಯಾವ ಕೆಲಸವೂ ದಾಸೋಹ ವ್ಯವಸ್ಥೆಯಿಲ್ಲದೆ ನಡೆಯುವುದಿಲ್ಲ. ಶ್ರೀ ಶ್ರೀಗಳವರಿಗೆ ಪ್ರಸಾದ ನಿಲಯಗಳೆಲ್ಲವೂ ಪೂರ್ಣಪ್ರಮಾಣದಲ್ಲಿ ಭಕ್ತರಿಂದ ತುಂಬಿದ ದೃಶ್ಯವನ್ನು ನೋಡುವುದರಿಂದ ಬರುವ ತೃಪ್ತಿಯು ಬಹುಶಃ ಬೇರೆ ಯಾವುದರಿಂದಲೂ ಬರುವುದಿಲ್ಲವೆಂಬುದು ನಮ್ಮೆಲ್ಲರಿಗೂ ತಿಳಿದ ವಿಷಯವೇ ಆಗಿದೆ. ಅದರಲ್ಲೂ ಸನ್ನಿಧಿಯವರ ಸುವರ್ಣ ಹಬ್ಬವನ್ನು ನೋಡಲು ಬರುವ ಭಕ್ತಾದಿಗಳ ಸಂಖ್ಯೆ ಅಧಿಕ. ದಾಸೋಹ ಮತ್ತು ಸಮಾರಂಭಗಳ ವ್ಯವಸ್ಥೆಗಾಗಿ ಸುಮಾರು 10 ಲಕ್ಷ ರೂಪಾಯಿಗಳ ವೆಚ್ಚ ತಗುಲಬಹುದೆಂದು ಅಂದಾಜು ಮಾಡಲಾಗಿದೆ. ಮಾನ್ಯ ಹಳೆಯ ವಿದ್ಯಾರ್ಥಿ ಮಿತ್ರರೂ ಸಹಕರಿಸಿ ನಮ್ಮ ಸುತ್ತಮುತ್ತಲ ಭಕ್ತಾದಿಗಳಿಂದ ಸಮಾರಂಭಕ್ಕೆ ಧನ-ಧಾನ್ಯ ರೂಪದ ಕಾಣಿಕೆ ವಸೂಲಿ ಮಾಡುವ ಮನಸ್ಸು ಮಾಡಬೇಕೆಂದು ಸಭೆಯನ್ನು ಪ್ರಾರ್ಥಿಸಿದರು. ಶ್ರೀ ಶ್ರೀಗಳವರು ಸಭೆಯನ್ನು ಆಶೀರ್ವದಿಸುತ್ತಾ, ಹಳೆಯ ವಿದ್ಯಾರ್ಥಿ ಸಮೂಹ ಶ್ರೀ ಕ್ಷೇತ್ರದ ಆಸ್ತಿ. ಹಿಂದೆ ಹಲವು ಸಂದರ್ಭಗಳಲ್ಲಿ ತಮ್ಮ ಅಪಾರ ಶಕ್ತಿಯನ್ನು ಕಾಣಿಕೆ ರೂಪದಲ್ಲಿ ಅರ್ಪಿಸಿದ್ದಾರೆ. ಮುಂಬರುವ ಸಮಾರಂಭದ ಬಗ್ಗೆ ಅವರಿಗೆ ಇರುವ ಕಳಕಳಿ ಹೆಮ್ಮೆ ತರುವಂತಾದ್ದು. ಸಮಾರಂಭ ನಡೆಯುವಾಗ ದಾಸೋಹದ ವ್ಯವಸ್ಥೆ ಬಗ್ಗೆ ಕೆಲವರು ಸಲಹೆ ಮಾಡಲು ಮುಂದಾದರು. ನಮ್ಮ ಗುರುಗಳ ಆಶೀರ್ವಾದದಿಂದ ಹಿಂದೆ ಎಂಥ ಕಠಿಣ ಪರಿಸ್ಥಿತಿಯಲ್ಲೂ ದಾಸೋಹ ವ್ಯವಸ್ಥೆಗೆ ಚ್ಯುತಿ ಬಂದಿಲ್ಲ. ಮುಂದೆ ಬರುವುದು ಬೇಡ ಎಂಬ ಸಮಾಧಾನಕರ ಉತ್ತರ ಕೊಡಬೇಕಾಯಿತು. ಆದ್ದರಿಂದ ಶ್ರೀ ಕ್ಷೇತ್ರದ ಕೇಂದ್ರ ಚೈತನ್ಯಶಕ್ತಿ ದಾಸೋಹ. ಅದಕ್ಕೆ ವಿಚ್ಛಿತ್ತಿ ಬರದ ಹಾಗೆ ಸಮಾರಂಭದ ಸಂದರ್ಭದಲ್ಲಿ ಹಳೆಯ ವಿದ್ಯಾರ್ಥಿಗಳೆಲ್ಲರೂ ಸಕ್ರಿಯವಾಗಿ ಭಾಗವಹಿಸಬೇಕೆಂದು ಆಶೀರ್ವದಿಸಿದರು.

( ರಕ್ಷಾಪುಟ ನೋಡಿ)



ಮಧ್ಯಾಹ್ನ 2 ಘಂಟೆಗೆ ಶ್ರೀ ಕ್ಷೇತ್ರದಲ್ಲಿಯೇ ಪತ್ರಿಕಾ ಪ್ರತಿನಿಧಿಗಳ ಸಭೆಯನ್ನು ಸುವರ್ಣ ಮಹೋತ್ಸವ ಸಮಾರಂಭದ ಸ್ವಾಗತ ಸಮಿತಿಯವರು ಕರೆದಿದ್ದರು. ಸಮಾರಂಭವು ಮೂರು ದಿವಸಗಳು ನಡೆಯುವ ಕಾರ್ಯಕ್ರಮಗಳನ್ನು ಒಳಗೊಂಡಿದೆ. ಕೇಂದ್ರ ಮತ್ತು ರಾಜ್ಯ ಸರಕಾರಗಳ ಮಂತ್ರಿವರ್ಯರು ಭಾಗವಹಿಸುವ ಕಾರ್ಯಕ್ರಮವಿದೆ. ಸಮಾರಂಭದ ಉದ್ಘಾಟನೆಯನ್ನು ರಾಷ್ಟ್ರದ ಪ್ರಥಮ ಪ್ರಜೆ ರಾಷ್ಟ್ರಾಧ್ಯಕ್ಷರು ಉದ್ಘಾಟಿಸಲು ಪ್ರಾರ್ಥಿಸಲಾಗುವುದು. ಸಮಾರಂಭದಲ್ಲಿ ಸಾಹಿತ್ಯ ಗೋಷ್ಠಿ, ಧರ್ಮಗೋಷ್ಠಿ, ಕವಿ ಗೋಷ್ಠಿ, ಮಹಿಳಾ ಗೋಷ್ಠಿ ಮುಂತಾದ ಗೋಷ್ಠಿಗಳು ಮತ್ತು ವಿವಿಧ ಧಾರ್ಮಿಕ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸ್ವಾಗತ ಸಮಿತಿಯ ಅಧ್ಯಕ್ಷರಾದ ಶ್ರೀ ಕೆ. ಶಿವರುದ್ರಯ್ಯನವರು ಸಭೆಯ ಮುಂದಿಟ್ಟರು. ಅವರು ಮುಂದುವರಿದು ಸುವರ್ಣ ಮಹೋತ್ಸವ ಸಮಾರಂಭದ ಜಂಟಿಯಾಗಿ ಶ್ರೀ ಕ್ಷೇತ್ರದ ಉಚಿತ ವಿದ್ಯಾರ್ಥಿ ನಿಲಯ ಮತ್ತು ಸಂಸ್ಕೃತ ಮತ್ತು ವೇದ ಮಹಾ ಪಾಠಶಾಲೆಗಳ ವಜ್ರಮಹೋತ್ಸವ ಸಮಾರಂಭ, ಆ ಸಮಾರಂಭಗಳ ಸಂಸ್ಕರಣ ಗ್ರಂಥಗಳ ಬಿಡುಗಡೆ ಬಗ್ಗೆ ವಿವರಿಸಿದರು, ಮುಖ್ಯವಾಗಿ ಶ್ರೀ ಶ್ರೀಗಳವರ ಸುವರ್ಣ ಮಹೋತ್ಸವದ ಸವಿನೆನಪಿಗಾಗಿ 200ಹಾಸಿಗೆಗಳುಳ್ಳ ಒಂದು ಸುಸಜ್ಜಿತ ದೊಡ್ಡ ಆಸ್ಪತ್ರೆಯನ್ನು ತೆರೆಯುವ ಯೋಜನೆಯನ್ನು ಸಭೆಯ ಮುಂದಿಡುತ್ತಾ ಶ್ರೀ ರಾಷ್ಟ್ರಪತಿಗಳಿಂದಲೇ ಆಸ್ಪತ್ರೆಯ ಕಟ್ಟಡದ ಶಂಕುಸ್ಥಾಪನೆಯನ್ನು ಮಾಡಿಸುವ ಉದ್ದೇಶವನ್ನು ತಿಳಿಸಿದರು. ●

---


## ವೀರಶೈವ ಕೋ-ಆಪರೇಟಿವ್ ಬ್ಯಾಂಕ್ ಲಿ.,

ಅಕ್ಕಮಹಾದೇವಿ ರಸ್ತೆ, ಅಕ್ಕಿಪೇಟೆ : : ಬೆಂಗಳೂರು–53

ಲಕ್ಷಗಳಲ್ಲಿ

| | | | |
|---|---|---|---|
| ಪಾವತಿಯಾದ ಷೇರು ಬಂಡವಾಳ | ... | ರೂ. | 12–73 |
| ಆಪದ್ಧನಗಳು | ... | ರೂ. | 4-39 |
| ಠೇವಣಿಗಳು | ... | ರೂ. | 61-31 |
| ಸಾಲಗಳು | .... | ರೂ. | 35-66 |
| ಹೂಡಿರುವ ಬಂಡವಾಳ | .... | ರೂ. | 86-00 |

ಲಾಭಾಂಶ ಹಂಚಿಕೆ
ಶೇಕಡಾ 10 ರಂತೆ.

ನಿಮ್ಮ ಠೇವಣಿಗಳಿಗೆ

ವಿಮೆ ರಕ್ಷೆ; ಹೆಚ್ಚಿನ ಬಡ್ಡಿ ದರ;

ಸುರಕ್ಷಿತ ಹಾಗು ಹೆಚ್ಚಿನ ಲಾಭಕ್ಕಾಗಿ ನಿಮ್ಮ ಹಣವನ್ನು ನಮ್ಮ ಬ್ಯಾಂಕಿನ ಠೇವಣಿಯಲ್ಲಿ ಇಂದೇ ತೊಡಗಿಸಿ.

ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಗೆ ನಿತ್ಯ ರುದ್ರಾಭಿಷೇಕ ಸೇವೆ ಸಲ್ಲಿಸಲಿಚ್ಛಿಸುವವರು ನಮ್ಮ ಬ್ಯಾಂಕಿನಲ್ಲಿರುವ ಖಾತೆಯಲ್ಲಿ ಹಣ ತೊಡಗಿಸಿ ಪೂಜಾ ವ್ಯವಸ್ಥೆ ಮಾಡಿಕೊಳ್ಳಬಹುದು.

ಸೇಫ್ ಲಾಕರ್‌ಗಳು ದೊರೆಯುತ್ತವೆ.

ಎಂ. ಶಿವಪ್ಪ, ಬಿ.ಎಸ್ಸಿ. ಬಿ.ಎಲ್.,
ಅಧ್ಯಕ್ಷರು

ಬಿ. ಬಸವರಾಜ್, ಬಿ.ಎಸ್ಸಿ.ಬಿ.ಎಲ್.,
ಉಪಾಧ್ಯಕ್ಷರು

ಬಿ. ಎಸ್. ಪರಮಶಿವಯ್ಯ, ಎಂ.ಎ.,
ಕಾರ್ಯನಿರ್ವಾಹಕ ನಿರ್ದೇಶಕರು

ಬಿ. ಎಂ. ಶ್ರೀಕಂಠಸ್ವಾಮಿ, ಎಲ್.ಇ.ಇ.,
ಖಜಾಂಚಿಗಳು

LICENCED TO POST WITHOUT PRE PAYMENT LICENCE NO. 3
SIDDAGANGA Monthly Reg No. KRN Q-9

## ನಾಳೆಗಾಗಿ ಬುನಾದಿಯಾದ ಎರಡು ವರ್ಷಗಳು. ಕಳೆದ ಎರಡು ವರ್ಷಗಳಲ್ಲಿ, ಕ್ರಿಯಾಶೀಲ ನಾಯಕತ್ವದಲ್ಲಿ ಕರ್ನಾಟಕ ಸರ್ಕಾರದ ಮುನ್ನಡೆ

ಶ್ರೀ ಆರ್. ಗುಂಡುರಾವ್ ಅವರ ನೇತೃತ್ವದ ಸರ್ಕಾರ ಅಧಿಕಾರ ವಹಿಸಿಕೊಂಡು ಎರಡು ವರ್ಷಗಳು ಸಂದವು. ಈ ಅವಧಿಯಲ್ಲಿ ಕೈಕೊಂಡ ಜನಹಿತ ಕಾರ್ಯಗಳನ್ನು ಹೆಮ್ಮೆಯಿಂದ ಸ್ಮರಿಸಬಹುದಾಗಿದೆ. ಹೊಸ ಸರ್ಕಾರ ಆಡಳಿತ ವಹಿಸಿಕೊಂಡ ದಿನವೇ ಪ್ರಾಶಸ್ತ್ಯಗಳನ್ನು ಗುರ್ತಿಸಿತು. ಮೊದಲನೆಯದಾಗಿ ಆಡಳಿತ ಕ್ರಮಗಳನ್ನು ಸುಗಮಗೊಳಿಸುವುದು. ಫಲಸ್ವರೂಪ ಜಿಲ್ಲಾ ಮತ್ತು ವಿಭಾಗೀಯ ಕೇಂದ್ರಗಳಲ್ಲಿ ಮಂತ್ರಿ ಮಂಡಲದ ಸಭೆಗಳನ್ನು ನಡೆಸಲಾಗುತ್ತಿದೆ.

ಜನತೆಯ ಮನೆಯ ಬಾಗಿಲಿಗೇ ಸರ್ಕಾರ ನಡೆದು ಬಂದಾಗ ಜನತೆಯೊಡನೆ ನೇರ ಸಂಪರ್ಕ, ಸ್ಥಳೀಯ ಸಮಸ್ಯೆಗಳ ಪ್ರತ್ಯಕ್ಷ ಅನುಭವ, ಪರಿಶೀಲನೆ, ಪರಿಹಾರ, ಬೆಳಗಾಂವ, ಗುಲ್ಬರ್ಗ ಮತ್ತು ಮೈಸೂರುಗಳಲ್ಲಿ ಸಭೆ ನಡೆಸಿ, ಆ ವಿಭಾಗಗಳಲ್ಲಿಯ ಅಭಿವೃದ್ಧಿ ಕಾರ್ಯಗಳಿಗಾಗಿ ಹಣದ ಮತ್ತು ಇತರ ಅಡಚಣೆಗಳ ನಿವಾರಣೆ, ಪ್ರಗತಿಪಥ ಚಲನೆಗೆ ನವಚೇತನ.

ಭೂ ಸುಧಾರಣೆ ಕಾಯ್ದೆ ಜಾರಿಗೆ ಬಂದು ಎರಡು ದಶಕಗಳಾದರೂ ಕಳೆದೆರಡು ವರ್ಷಗಳ ಸಾಧನೆ ಅವಿಸ್ಮರಣೀಯ. ಈಗಾಗಲೇ ಶೇ. 95 ರಷ್ಟು ಗೇಣಿದಾರರ ಅರ್ಜಿಗಳು ವಿಲೇವಾರಿಯಾಗಿದ್ದು ಸುಮಾರು 5 ಲಕ್ಷ ಗೇಣಿದಾರರು ಭೂ ಒಡೆತನ ಪಡೆದಿದ್ದಾರೆ. ಸುಮಾರು ಒಂದು ಲಕ್ಷ ಭೂರಹಿತ ಬಡವರಿಗೆ ಭೂಮಿ ಹಂಚಲಾಗಿದೆ. ಇದರಲ್ಲಿ ಶೇ. 50 ರಷ್ಟು ಜನರು ಹರಿಜನರು.

ಹಾರಂಗಿ, ಹೇಮಾವತಿ, ಹಾಗೂ ಮಲಪ್ರಭಾಗಳಿಂದ ನೀರು ಬಿಡುಗಡೆ. ಹೆಚ್ಚುವರಿ ಭೂಮಿಗೆ ನೀರಿನ ಪೂರೈಕೆ, ಹಸಿರು ಕ್ರಾಂತಿಗೆ ಮತ್ತಷ್ಟು ಬಲ. ಹಿಂದುಳಿದ ಪ್ರದೇಶ ಗುಲ್ಬರ್ಗಾ ವಿಭಾಗದ ಅಭಿವೃದ್ಧಿಗಾಗಿ ಪ್ರತ್ಯೇಕ ಗುಲ್ಬರ್ಗಾ ಪ್ರದೇಶ ಅಭಿವೃದ್ಧಿ ಕಾರ್ಪೊರೇಷನ್ ಸ್ಥಾಪನೆ. ಗುಲ್ಬರ್ಗಾ ನಗರಸಭೆಯನ್ನು ಕಾರ್ಪೊರೇಷನ್ ಆಗಿ ಪರಿವರ್ತಿಸಲಾಯಿತು.

ವಿಶ್ವ ಕನ್ನಡ ಸಮ್ಮೇಳನಕ್ಕಾಗಿ ಭರದಿಂದ ಸಿದ್ಧತೆ ನಡೆಯುತ್ತಿದ್ದು, ಜಿಲ್ಲಾ ಕೇಂದ್ರಗಳಲ್ಲಿ ಸಾಹಿತ್ಯ ಭವನ ನಿರ್ಮಿಸಲು ನಿರ್ಧರಿಸಲಾಗಿದೆ. ಪತ್ರಿಕೋದ್ಯಮದ ಬೆಳವಣಿಗೆಗಾಗಿ ಪತ್ರಿಕಾ ಅಕಾಡೆಮಿಯನ್ನು ಸ್ಥಾಪಿಸಲಾಗಿದೆ. ರಾಜ್ಯೋತ್ಸವ ಬೆಳ್ಳಿಹಬ್ಬದ ಈ ವರ್ಷ ಮುನ್ನೂರಕ್ಕೂ ಹೆಚ್ಚು ಜನಸಂಖ್ಯೆ ಇರುವ ಶಾಲೆಗಳಿಲ್ಲದ ಎಲ್ಲ ಹಳ್ಳಿಗಳಿಗೂ ಪ್ರಾಥಮಿಕ ಶಾಲೆಗಳನ್ನು ಮತ್ತು ಕೊಠಡಿಗಳನ್ನು ಒದಗಿಸಬೇಕೆಂಬುದು ಸರ್ಕಾರದ ನಿಲವು. ಇದರಂತೆ 649 ಹಳ್ಳಿಗಳಲ್ಲಿ ಶಾಲೆಗಳನ್ನು ತೆರೆಯಲು ಮತ್ತು 1,416 ಹಳ್ಳಿಗಳಲ್ಲಿ ಶಾಲಾ ಕೊಠಡಿಗಳನ್ನು ನಿರ್ಮಿಸಲು ಕ್ರಮ ಕೈಗೊಳ್ಳಲಾಗಿದೆ.

ಪ್ರಸ್ತುತ ಸರ್ಕಾರ ಗ್ರಾಮೀಣ ವಸತಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿದೆ. 1973–74ರಿಂದ 1979 ರ ಅಂತ್ಯದ ವೇಳೆಗೆ 1.36 ಲಕ್ಷ ಮನೆಗಳನ್ನು ಕಟ್ಟಿ ಪೂರ್ಣಗೊಳಿಸಿದರೆ ಜನವರಿ 1980 ರಿಂದ ಇಲ್ಲಿಯವರೆಗೆ 1.33 ಲಕ್ಷ ಮನೆಗಳನ್ನು ಕಟ್ಟಿ ಮುಗಿಸಲಾಗಿದೆ. ಒಟ್ಟು ಕಟ್ಟಲಾದ ಮನೆಗಳ ಪೈಕಿ 1.20 ಲಕ್ಷ ಮನೆಗಳು ಹರಿಜನರಿಗೆ ಸೇರಿವೆ. ಮತ್ತೆ 6,000 ಮನೆಗಳ ನಿರ್ಮಾಣಕ್ಕೆ ಮುಂಜೂರಾತಿ ನೀಡಲಾಗಿದ್ದು 3 ಕೋಟಿ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ. ಹರಿಜನರ ಸಮಗ್ರ ಅಭಿವೃದ್ಧಿಗಾಗಿ ವಿಶೇಷ ಯೋಜನೆಯೊಂದನ್ನು ಅಭಿವೃದ್ಧಿ ಕಾರ್ಯಗಳಿಗಾಗಿ 135.66 ಕೋಟಿ ರೂ. ಗಳನ್ನು ಒದಗಿಸಲಾಗಿದೆ.

ಕರ್ನಾಟಕದಲ್ಲಿ ಕಂಡುಬಂದಿರುವ ನವಚೇತನವೇ ಸರ್ಕಾರದ ಸಾಧನೆಗೆ ಸಾಕ್ಷಿ. ಅತ್ಯುತ್ತಮ ಯೋಜನೆ ವಿಧಾನವೆಂದರೆ, ಈವರೆಗಿನ ಸಾಧನೆಗಳ ಸಿಂಹಾವಲೋಕನ, ಅವುಗಳ ಮೌಲ್ಯಮಾಪನ ಹಾಗೂ ಅವುಗಳ ಮಾರ್ಗದರ್ಶನದಿಂದ ಹೊಸದಿಕ್ಕಿನಲ್ಲಿ ಹೊಸ ಭರವಸೆಯೊಂದಿಗೆ ಮುನ್ನಡೆಯುವುದು.

**ಪ್ರಕಟಣೆ: ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ.**